

ಕರ್ನಾಟಕ ಗಾಂಧಿ ಸ್ಮಾರಕ ನಿಧಿ

**ಬಾಪು ಪ್ರಪಂಚ**
ಕನ್ನಡ–ಇಂಗ್ಲೀಷ್ ಮಾಸಿಕ

**BAPU PRAPANCHA**
(A monthly Kannada English Magazine of Gandhian Thoughts)

ಪ್ರಧಾನ ಸಂಪಾದಕರು
**ನಾಡೋಜ ಡಾ. ವೂಡೇ ಪಿ. ಕೃಷ್ಣ**

Chief Editor :
**Nadoja Dr Wooday P Krishna**

ಸಂಪಾದಕರು :
**ಎನ್. ಆರ್. ವಿಶುಕುಮಾರ್**

Editor :
**N R Vishukumar**

**ಪ್ರಕಾಶಕರು :**
**ಕಾರ್ಯದರ್ಶಿ,**
**ಕರ್ನಾಟಕ ಗಾಂಧಿ ಸ್ಮಾರಕ ನಿಧಿ**
ಗಾಂಧಿ ಭವನ, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560 001

Published by :
**Secretary**
**Karnataka Gandhi Smaraka Nidhi**
Gandhi Bhavana, Kumara Park East
Bangalore - 560 001

080 22261967 / 9738605799
gandhibhavanabengaluru@gmail.com

Printed at :
**Printastic**
272, 2nd Main Road, 6th Cross,
Lavakushanagar, Laggere Bangalore-58
Ph : +91 9886747417
E-mail : printastic.21@gmail.com



Design : **Ujwal Creations,** Bangalore

ರೂ. 28/– **BAAPU PRAPANCHA**

ಕರ್ನಾಟಕ ಗಾಂಧಿ ಸ್ಮಾರಕ ನಿಧಿ

# ಬಾಪು ಪ್ರಪಂಚ

ಕನ್ನಡ–ಇಂಗ್ಲೀಷ್ ಮಾಸಿಕ ಸಂಪುಟ–06 • ಸಂಚಿಕೆ–02 • ಜುಲೈ 2024



# ಪತ್ರಗಳು

ಪ್ರಿಯ ವಿಶುಕುಮಾರ್,

ನಿಮ್ಮ 'ಬಾಪು ಪ್ರಪಂಚ' ಕ್ರಮವಾಗಿ ಬರುತ್ತಿದೆ. ಗಾಂಧಿ ಕುರಿತಂತೆ ಅಪರೂಪದ ಮಾಹಿತಿಗಳನ್ನು ಪ್ರಕಟಿಸುವ ಮೂಲಕ, ಗಾಂಧಿ ಬದುಕು ಮತ್ತು ತತ್ವಗಳನ್ನು ಪರಿಚಯಿಸುವಲ್ಲಿ ಇದರ ಪಾತ್ರ ಮೆಚ್ಚುವಂತದು.

ಜೂನ್ ತಿಂಗಳ ಸಂಚಿಕೆಯಲ್ಲಿ ನನಗೆ ಆಪ್ತರಾಗಿದ್ದ ಕೆ.ಎಂ. ಶಂಕರಪ್ಪ ಅವರ ಒಂದು ಬರಹವೂ ಇದೆ. ಹಳೆಯ ನೆನಪುಗಳು ಮರುಕಳಿಸಿದವು.ತುಂಬಾ ಪ್ರೀತಿಯ ಮನುಷ್ಯ. ಚೀನಾದಿಂದಲೋ ಏನೋ ನನಗೆ ಒಂದು "ಸ್ಮೋಕಿಂಗ್ ಪೈಪ್" ತಂದುಕೊಟ್ಟ ಅವರ ವಿಶ್ವಾಸದ ನಡೆ ಯಾವತ್ತೂ ಮರೆತಿಲ್ಲ.

ಶುಭ ಹಾರೈಕೆಗಳೊಂದಿಗೆ.

**ಎಚ್ ಎಸ್ ಈಶ್ವರ್**

ವಿಶ್ರಾಂತ ಪ್ರಾಧ್ಯಾಪಕರು, ಸಂವಹನ ಮತ್ತು ಪತ್ರಿಕೋದ್ಯಮ ವಿಭಾಗ
ಬೆಂಗಳೂರು ವಿಶ್ವವಿದ್ಯಾಲಯ

* * *

ಮಾನ್ಯರೆ,

ಸಂಕ್ಷಿಪ್ತವಾಗಿ ಗೌತಮ ಬುದ್ಧರ ಜೀವನಚಿತ್ರ ನೀಡಿದ್ದೀರಿ . ಬುದ್ಧ ಮತ್ತು ಗಾಂಧೀಜಿಯ ಸಮಾನ ಅಂಶ – ಅಹಿಂಸೆ . ಆಂಗ್ಲರ ಆಡಳಿತವನ್ನು ಅಹಿಂಸೆಯೆಂಬ ಮಹಾ ಅಸ್ತ್ರದಿಂದ ಮಣಿಸಿದ ಮಹಾತ್ಮ ಗಾಂಧಿ ಜಗತ್ತಿಗೆ ಅಹಿಂಸೆಯ ಮಹಾಶಕ್ತಿಯನ್ನು ಪರಿಚಯಿಸಿದ್ದಾರೆ . ಕ್ರಿಸ್ತಪೂರ್ವ 5 ನೇ ಶತಮಾನದಲ್ಲಿ ಬುದ್ಧ ಮನುಕುಲಕ್ಕೆ ಬೆಳಕಾಗಿ ಬಂದರು. ಮಹಾತ್ಮ ಗಾಂಧಿ 19 ನೇ ಶತಮಾನದಲ್ಲಿ ಮಾನವೀಯತೆಯ ಮಹಾನ್ ರೂಪವಾಗಿ ಕಂಗೊಳಿಸಿದರು .

**ಶ್ರೀನಿವಾಸ್, ತುಮಕೂರು**

* * *

ಮಾನ್ಯರೆ ,

ಸರ್ವೋದಯ ಸತ್ಯನಾರಾಯಣ ತಮ್ಮ ಬದುಕನ್ನು ಸರ್ವೋದಯ ಸಂಸ್ಥೆಗಳಲ್ಲೇ ಸೀಮಿತ ಸಂಬಳದಲ್ಲಿ ಕಳೆದದ್ದು ಮೆಚ್ಚುಗೆಯ ಸಂಗತಿ. ಗಾಂಧೀಜಿಯವರ ಸರ್ವೋದಯ ತತ್ವವನ್ನು ಸದಾ ತಮ್ಮ ಬದುಕಿನಲ್ಲಿ ಅಪ್ಪಿಕೊಂಡು ಬಾಳಿ ಈಗ ಸಂತೃಪ್ತ ಜೀವನ ನಡೆಸುತ್ತಿರುವ ಆ ಹಿರಿಯ ಜೀವಕ್ಕೆ ಸಾವಿರ ಶರಣು

**ಶಿವಸ್ವಾಮಿ, ಮೈಸೂರು**




ಪ್ರಿಯರೆ,

ಬಾಪೂ ಪ್ರಪಂಚ ಸಂಚಿಕೆಯ ಬಗ್ಗೆ ಓದುಗರು ವ್ಯಕ್ತಪಡಿಸುತ್ತಿರುವ ಸದಭಿಪ್ರಾಯಗಳಿಗೆ ಗಾಂಧಿ ಸ್ಮಾರಕ ನಿಧಿ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ನಿಮ್ಮ ಅಪೇಕ್ಷೆಯಂತೆ ಬಾಪೂ ಪ್ರಪಂಚ ಪತ್ರಿಕೆಯನ್ನು ಹೆಚ್ಚು ಜನರಿಗೆ ತಲುಪಿಸಲು ಪ್ರಯತ್ನಿಸುತ್ತೇವೆ.

**ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಪ್ರಕಟಣೆಗಳು ಮತ್ತು ಬಾಪೂ ಪ್ರಪಂಚದ ಇತ್ತೀಚಿನ ಸಂಚಿಕೆಗಳನ್ನು https://gandhibhavan.in ಜಾಲತಾಣದಲ್ಲಿ ವೀಕ್ಷಿಸಿ.**



ಚಂದಾ ಕಳುಹಿಸುವ ಮತ್ತು ಪತ್ರಿಕೆಯ ಬಗ್ಗೆ ತಮ್ಮ ಅಭಿಪ್ರಾಯ ತಿಳಿಸುವ ವಿಳಾಸ :

**ಸಂಪಾದಕರು, ಬಾಪು ಪ್ರಪಂಚ**
ಗಾಂಧಿ ಭವನ
ಕುಮಾರ ಪಾರ್ಕ್ ಪೂರ್ವ,
ಬೆಂಗಳೂರು –560001
gandhibhavanabengaluru@gmail.com



**ಬಾಪು ಪ್ರಪಂಚ ಪತ್ರಿಕೆಯ ವಾರ್ಷಿಕ ಚಂದಾ ಹಣ 250 ರೂಗಳನ್ನು ಈ ಕೆಳಗಿನ ಕ್ಯೂಆರ್ ಕೋಡ್ ಮೂಲಕ ಪಾವತಿಸಿ, ನಿಮ್ಮ ಅಂಚೆ ವಿಳಾಸವನ್ನು ಗಾಂಧಿ ಭವನದ ಮೇಲಿನ ವಿಳಾಸಕ್ಕೆ ಹಣ ಪಾವತಿ ವಿವರಗಳ ಜೊತೆ ಕಳುಹಿಸಿ.**



# ಗಾಂಧಿ ಅಂಬೇಡ್ಕರ್ ಜುಗಲ್‌ಬಂದಿ

–ದೇವನೂರ ಮಹಾದೇವ

**(8.1.2024 ರಂದು ಮೈಸೂರು ವಿಶ್ವವಿದ್ಯಾಲಯದ ಗಾಂಧಿ ಅಧ್ಯಯನ ಕೇಂದ್ರದ ವತಿಯಿಂದ ಇತಿಹಾಸತಜ್ಞ ರಾಮಚಂದ್ರ ಗುಹಾ ಅವರೊಂದಿಗೆ ನಡೆದ "ಗಾಂಧಿ–ಅಂಬೇಡ್ಕರ್ ಪ್ರಸ್ತುತತೆ" ಮಾತುಕತೆಯ ಸಂದರ್ಭದಲ್ಲಿ ದೇವನೂರ ಮಹಾದೇವ ಅವರು ಆಡಿದ ಮಾತುಗಳ ವಿಸ್ತೃತ ಅಕ್ಷರ ರೂಪ)**

ಇತಿಹಾಸತಜ್ಞ ರಾಮಚಂದ್ರ ಗುಹಾ ಅವರನ್ನು ಭೇಟಿಯಾದೆ. ಇದು ಹೇಗಿತ್ತು ಅಂದರೆ ಚಿಕ್ಕಂದಿನಲ್ಲಿ, ಅಣ್ಣ ಎಲ್ಲೊ ಒಂದು ಕಡೆಗೆ, ತಮ್ಮ ಇನ್ನೊಂದು ಕಡೆಗೆ ಅಗಲಿ ಬಿಡುತ್ತಾರೆ. ಹೀಗೆ ಬೇರೆಬೇರೆಯಾದವರು ತಮ್ಮ ಇಳಿಗಾಲದಲ್ಲಿ ಅಂದರೆ ಸೀನಿಯರ್ ಸಿಟಿಜನ್ಸ್ ಆದ ಮೇಲೆ ಭೇಟಿಯಾದರೆ ಹೇಗಿರುತ್ತೊ ಹಾಗಿತ್ತು.

ಇದಕ್ಕೆ ಕಾರಣವೂ ಇಂದು ತಿಳೀತು. ನಾಲ್ವಡಿಯವರು ಆರಂಭಿಸಿದ ಪಂಚಮರ ಶಾಲೆ, ಹಾಸ್ಟೆಲ್‌ಗಳನ್ನು ರಾಜ್ಯದಾದ್ಯಂತ ಬೈಸಿಕಲ್‌ನಲ್ಲಿ ಸುತ್ತುತ್ತ ದಲಿತ ಮಕ್ಕಳನ್ನು ತನ್ನ ಮಕ್ಕಳಂತೆ ಪೊರೆದವರು ಗೋಪಾಲಸ್ವಾಮಿ ಅಯ್ಯರ್ ಅವರು. ಈ ಪಂಚಮರ ಗೋಪಾಲಸ್ವಾಮಿ ಅಯ್ಯರ್, ಗುಹಾ ಅವರ ತಾತನ ಸಹೋದರ. ನನಗೆ ಗುಹಾ ಅವರ ಭೇಟಿಯು ನನ್ನೊಬ್ಬ ಸಹೋದರನ ಭೇಟಿ ಅನ್ನಿಸಿದ್ದಕ್ಕೆ ಬಹುಶಃ ಇದೂ ಕಾರಣವಿರಬಹುದು.

ಗುಹಾ ಅವರು ನನ್ನನ್ನು ಕೇಳಿದರು, 'ಗೋಪಾಲಸ್ವಾಮಿ ಅಯ್ಯರ್ ಅವರನ್ನು ದಲಿತರು ಈಗಲೂ ನೆನಪಿಸಿಕೊಳ್ತಾರ?' ಅಂತ. ಅದಕ್ಕೆ ನಾನೆಂದೆ– "ದಲಿತ ಸಮುದಾಯದಲ್ಲಿ ನನ್ನ ಬಗ್ಗೆ ಅನೇಕಾನೇಕ

ಭಿನ್ನಾಭಿಪ್ರಾಯ, ಅಸಮಾಧಾನ ಇರಬಹುದು. ನನ್ನನ್ನು 'ದಲಿತ ವಿರೋಧಿ' ಅನ್ನುವವರೂ ಇದ್ದಾರೆ. ಆದರೆ ಗೋಪಾಲಸ್ವಾಮಿ ಅಯ್ಯರ್ ಮತ್ತು ಕುದ್ಮುಲ್ ರಂಗರಾವ್ ಅವರನ್ನು ಈಗಲೂ ಕೃತಜ್ಞತೆಯಿಂದ ಹೃದಯಪೂರ್ವಕವಾಗಿ ದಲಿತರು ನೆನಪಿಸಿಕೊಳ್ತಾರೆ" ಎಂದು ಹೇಳಿದೆ.

'ಗಾಂಧಿ ಮತ್ತು ಅಂಬೇಡ್ಕರ್ ಪ್ರಸ್ತುತತೆ' ಎಂಬ ಈ ವಿಷಯ ಇದೆಯಲ್ಲ, ಇದು ತಂತಿಯ ಮೇಲಿನ ನಡಿಗೆ. ಜೊತೆಗೆ ಹಳೆಯದರಲ್ಲೇ ನೇತಾಕಿಕೊಂಡು, ಯಾರೂ ಪ್ರಸ್ತುತತೆಯನ್ನು ಚರ್ಚೆ ಮಾಡುವುದಿಲ್ಲ. ಅದೇನೇ ಇರಲಿ, ಇಲ್ಲಿ ನಾನು ಒಂದೆರಡು ವಿಷಯಗಳನ್ನಷ್ಟೆ ನಿಮ್ಮೊಡನೆ ಹಂಚಿಕೊಳ್ಳುತ್ತೇನೆ: ಗಾಂಧಿ ಮತ್ತು ಅಂಬೇಡ್ಕರ್ ಅವರ ಅಂತರಾಳದ ಚಿಲುಮೆಯು ಬೇರೆ ಬೇರೆಯದೇ ಆಗಿತ್ತು. ಅಂತರಾಳಕ್ಕೆ ತಕ್ಕಂತೆ ಅಭಿವ್ಯಕ್ತಿಗಳು ಭಿನ್ನಭಿನ್ನವಾಗಿ ಕಾಣಿಸುತ್ತಿರುತ್ತವೆ. ನಾವು ಅಭಿವ್ಯಕ್ತಿಯ ರೀತಿಯನ್ನು ನೋಡುವ ಬದಲು, ಈ ಇಬ್ಬರ ಅಂತರಾಳವನ್ನು ದರ್ಶಿಸಬೇಕಾಗಿದೆ. ಉದಾಹರಣೆಗೆ ಗಾಂಧಿಯವರದು ಹೆಚ್ಚಾಗಿ ಅಂತರ್ಬೋಧೆಯ[ಖಟಣಣುಣುಖತಜ] ಚಿಂತನಾ ಕ್ರಮ ಆಗಿತ್ತು. ಗಾಂಧಿಗೆ ಏನಾದರೂ ಸಮಸ್ಯೆ ಎದುರಾದರೆ, 'ದೇವರೇ ದೇವರೆ ದಾರಿ ತೋರಿಸಪ್ಪಾ' ಅಂತ ರಾತ್ರಿಯೆಲ್ಲಾ ಒದ್ದಾಡುತ್ತಿದ್ದರು. ಎಚ್ಚರವಾದಾಗ ಏನು ಕಾಣಿಸುತ್ತಿತ್ತೊ ಅದನ್ನು ನುಡಿಯುತ್ತಿದ್ದರು. ತಮ್ಮ ನುಡಿಗೆ ತಕ್ಕಂತೆ ನಡೆಯುತ್ತಿದ್ದರು.

ಸಮಸ್ಯೆ ಎದುರಾದಾಗ ಅಂಬೇಡ್ಕರ್ ಅವರು ರಾತ್ರಿಯೆಲ್ಲಾ ನಿದ್ದೆಗೆಟ್ಟು ಚಿಂತಿಸುತ್ತಿದ್ದರು. ಬೌದ್ಧಿಕವಾಗಿ ವೈಚಾರಿಕವಾಗಿ ತಾರ್ಕಿಕವಾಗಿ ಅವರೊಳಗೇ ಘರ್ಷಣೆ ನಡೆಯುತ್ತಿತ್ತು. ಎಚ್ಚರವಾದ ಮೇಲೆ ಆ ಘರ್ಷಣೆಯ ಬೆಳಕಿನ ಎಳೆ ಹಿಡಿದು ನುಡಿಯುತ್ತಿದ್ದರು. ತಮ್ಮ ನುಡಿಗೆ ತಕ್ಕಂತೆ ನಡೆಯುತ್ತಿದ್ದರು. ಒಬ್ಬರು ಖಟಣಣುಣುಖತಜ, ಇನ್ನೊಬ್ಬರು ಖಚಿಣುಚಿಟಿಚಿಟ! ಈ ಅಂತರಾಳದ ಚಿಲುಮೆಗೆ ತಕ್ಕಂತೆ ಅವರ ನುಡಿಗಟ್ಟು, ಭಾಷೆ, ಅಭಿವ್ಯಕ್ತಿಗಳು ಭಿನ್ನಭಿನ್ನವಾಗಿ ಹೊರಹೊಮ್ಮುತ್ತಿತ್ತು. ಹಾಗಾಗಿ ಗಾಂಧಿಯವರ ನುಡಿಗಳಲ್ಲಿ ತರ್ಕ ಇಲ್ಲ, ಅಂಬೇಡ್ಕರ್ ತರ್ಕಬದ್ಧ ಅನ್ನಿಸಬಹುದು. ಇವರಿಬ್ಬರ ನಡುವೆ ಸಮಸ್ಯೆ ಉಂಟಾಗಲು ಇದು ಕಾರಣ ಅನ್ನಿಸುತ್ತದೆ.

ಉದಾಹರಣೆಗೆ– ಅಸ್ಪೃಶ್ಯತೆ ಪಾಪ ಅಂತ ಗಾಂಧಿ ಹೇಳ್ತಾರೆ. ಹಾಗೇ ಅಸ್ಪೃಶ್ಯತೆ ಅಪರಾಧ ಅಂತ ಅಂಬೇಡ್ಕರ್ ಹೇಳ್ತಾರೆ. ನಾವು ಎರಡನ್ನೂ ಹೇಳೋಣ. ಏನಂತೆ ಈಗ? ಅಸ್ಪೃಶ್ಯತೆ ಪಾಪವೂ ಹೌದು, ಅಪರಾಧವೂ ಹೌದು. ಇಲ್ಲಿ ಭಿನ್ನಾಭಿಪ್ರಾಯ ಹುಡುಕುವುದೇಕೆ? ಆದರೆ ಇಂದು ಎಲ್ಲರೂ ತನ್ನಂತೆಯೇ ನುಡಿಯಬೇಕು, ನಡೆಯಬೇಕು, ಆಲೋಚಿಸಬೇಕು ಎಂಬ ಕಾಂಕ್ಷೆ ಹೆಚ್ಚಾಗಿದೆ. ಈ ನನ್ನ ಸಹಜೀವಿಗಳಲ್ಲಿ ಒಂದು ನಿವೇದನೆ ಮಾಡುವೆ– ಒಂದು ಕ್ಷಣ ಕಣ್ಮುಚ್ಚಿಕೊಳ್ಳಿರಿ. ನಿಮ್ಮೊಳಗೆ ಕಲ್ಪಿಸಿಕೊಳ್ಳಿ. ಒಂದು ದೊಡ್ಡ ಹಾಲ್‌ನಲ್ಲಿ– ಸಾವಿರಾರು ಜನರು ಸೇರಿದ್ದಾರೆ. ಅಲ್ಲಿರುವ ಎಲ್ಲರೂ ನಿಮ್ಮಂತೆ ನುಡಿಯುತ್ತಿದ್ದಾರೆ, ನಗುತ್ತಿದ್ದಾರೆ, ಕಿರುಚುತ್ತಿದ್ದಾರೆ, ಆಲೋಚಿಸುತ್ತಿದ್ದಾರೆ ಕೂಡ. ಎಲ್ಲವೂ ನಿಮ್ಮದೇ ಪ್ರತಿರೂಪ– ನಿಮ್ಮದೇ ರೋಬೋಟ್‌ನಂತೆ ಎಲ್ಲರೂ! ಈಗ ಕಣ್ಣು ತೆರೆಯಿರಿ. ಹೇಳಿ, ನೀವು ಕಣ್ಮುಚ್ಚಿ ಕಂಡದ್ದು ಹೇಗಿತ್ತು? ನನಗಂತು ಈ ಕಲ್ಪನೆ ಕಣ್ಮುಂದೆ ಬಂದರೆ ಬದುಕು ನರಕ ಅನ್ನಿಸಿಬಿಡುತ್ತೆ. ಇಂದು, ಬಹುತ್ವದ ಹಿಂದೂ ಧರ್ಮಗಳ ಮೇಲೆ ಏಕಮುಖದ ಚಾತರ್ವರ್ಣದ ಹಿಂದುತ್ವ ಸವಾರಿ ಮಾಡುತ್ತಿದೆಯಲ್ಲಾ ಹಾಗೆ.

ಇದರೊಡನೆ, ಇವರಿಬ್ಬರ ನಡುವೆ ಇನ್ನೊಂದು ಹೋಲಿಕೆ ಮಾಡುವೆ. ತಾನು ಸನಾತನ ಹಿಂದೂ ಎಂದು ತನ್ನ ಜೀವನವನ್ನು ಆರಂಭಿಸಿದ ಗಾಂಧಿ ಕೊನೆಗೆ– ಸಹನೆ ಮತ್ತು ಪ್ರೀತಿ ನನ್ನ ಧರ್ಮ– ಎಂಬಲ್ಲಿಗೆ ಬಂದು ನಿಲ್ಲುತ್ತಾರೆ. ಹಾಗೇನೆ ಹಿಂದೂ ಧರ್ಮದ ನರಕದಿಂದ ಬಚಾವಾಗಲು ಅಂಬೇಡ್ಕರ್ ಬುದ್ಧನ ಕಾರುಣ್ಯಕ್ಕೆ, ಭ್ರಾತೃತ್ವಕ್ಕೆ ಬಂದು ತಲುಪುತ್ತಾರೆ. ಸಹನೆ, ಪ್ರೀತಿ, ಕಾರುಣ್ಯ, ಭ್ರಾತೃತ್ವ– ಈ ನಾಲ್ಕೂ ಬೇರೆ ಬೇರೆ ಪದಗಳು ಇರಬಹುದು. ಈ ನಾಲ್ಕು ಪದಗಳ ಆಳದಲ್ಲಿರುವುದು ಒಂದೇ ಅಲ್ಲವೇ? ಇವು ತಲುಪುವುದು ಎಲ್ಲರನ್ನೂ ಮಾನವೀಯವಾಗಿ ಒಳಗೊಳ್ಳುವತ್ತಲೇ. ಒಟ್ಟಿನಲ್ಲಿ ಈ ಇಬ್ಬರೂ ಆಳದಲ್ಲಿ ಧಾರ್ಮಿಕತೆಯ ಸ್ವಭಾವದವರಾಗಿದ್ದರು. ಇದನ್ನು ಅರ್ಥ ಮಾಡಿಕೊಂಡು ನಾವು ಮುಂದುವರಿಯಬೇಕಾಗುತ್ತದೆ.

ಆದರೆ ನಾವು ಮುಂದುವರಿಯುತ್ತಿಲ್ಲ! ಹಳತರಲ್ಲೆ ಹೂತು ಹೋಗಿದ್ದೇವೆ. ಉದಾಹರಣೆಗೆ ಇಲ್ಲೇ ಸಂಶೋಧನಾ ವಿದ್ಯಾರ್ಥಿಯೊಬ್ಬರು ಒಂದೆರಡು ಪ್ರಶ್ನೆ ಕೇಳಿದರು– 'ಗಾಂಧಿಯವರ ಆತ್ಮಕತೆಯಲ್ಲಿ ಅಂಬೇಡ್ಕರ್ ಅವರ ಬಗ್ಗೆ ಒಂದು ಮಾತೂ ಪ್ರಸ್ತಾಪವಾಗುವುದಿಲ್ಲ, ಪೂನಾ ಒಪ್ಪಂದದ ಬಗ್ಗೆ ಒಂದೇ ಒಂದು ಸಾಲು ಬರೆಯುವುದಿಲ್ಲ: ಜೊತೆಗೆ ಮುಸ್ಲಿಮರಿಗೆ, ಕ್ರಿಶ್ಚಿಯನ್ನರಿಗೆ, ಸಿಖ್ಖರಿಗೆ, ಪ್ರತ್ಯೇಕ ಚುನಾಯಕ(Separate Electorate) ಇದ್ದಾಗ, ಗಾಂಧಿಯವರು ನಿಮ್ನ ವರ್ಗಗಳಿಗೆ ಪ್ರತ್ಯೇಕ ಚುನಾಯಕ ನೀಡುವುದಕ್ಕೆ ಸಮ್ಮತಿಸದೇ, ಯಾಕೆ ಅಮರಣಾಂತ ಉಪವಾಸ ಕೈಗೊಂಡರು?' ಎಂದು ಪ್ರಶ್ನಿಸಿದರು. ಇದಕ್ಕೇನು ಹೇಳಲಿ? ಗಾಂಧಿಯವರ ಜೀವನ ಕಥನವು ಅವರ ಬಾಲ್ಯದಿಂದ 1921ನೆಯ ಇಸವಿವರೆಗಿನ ಕಾಲಮಾನದ ದಾಖಲು ಮಾತ್ರ. ಹೀಗಿರುವಾಗ ಅಂಬೇಡ್ಕರ್ ಅವರ ಪ್ರಸ್ತಾಪವು ಹೇಗೆ ತಾನೇ 1921ರವರೆಗಿನ ಆತ್ಮಕತೆಯಲ್ಲಿ ಬರಲು ಸಾಧ್ಯ? 1921ರಲ್ಲಿ ಅಂಬೇಡ್ಕರ್ ಅವರು ಆಗಷ್ಟೇ ಮಾಸ್ಟರ್ ಡಿಗ್ರಿ ಮುಗಿಸಿದ ವಿದ್ಯಾರ್ಥಿಯಾಗಿದ್ದರು. ಸಮಾಧಾನದಿಂದ ಇಂತವುಗಳನ್ನು ನಾವು ಗಮನಿಸಬೇಕಾಗಿದೆ.

ಇನ್ನು ಪೂನಾ ಒಪ್ಪಂದದ ವಿಚಾರದಲ್ಲಿ ಇನ್ನೂ ಹೆಚ್ಚು ಸಮಾಧಾನದಿಂದ ಗಮನಿಸಬೇಕಾಗಿದೆ. ಮೊದಲನೆಯದಾಗಿ, ಬ್ರಿಟಿಷ್ ನೇರ ಆಳ್ವಿಕೆಗೆ ಒಳಪಟ್ಟ ಎಂಟು ಪ್ರಾಂತ್ಯಗಳಲ್ಲಿ ಮುಸ್ಲಿಂ, ಕ್ರಿಶ್ಚಿಯನ್, ಸಿಖ್ ಧರ್ಮದವರಿಗೆ ಪ್ರತ್ಯೇಕ ಚುನಾಯಕ ವ್ಯವಸ್ಥೆ ಅದಾಗಲೇ 1909ರಿಂದಲೇ ಆರಂಭವಾಗಿತ್ತು. ಇದನ್ನು ಪ್ರತಿಭಟಿಸಿ ಪ್ರಾಣ ಪಣವಿಟ್ಟು ಗಾಂಧೀಜಿ ಹೋರಾಡಲಿಲ್ಲ ನಿಜ. ಆ 1909ರ ಸಮಯದಲ್ಲಿ ಗಾಂಧಿ ದಕ್ಷಿಣ ಆಫ್ರಿಕಾದಲ್ಲಿ, ಬಹುಶಃ ಜೈಲಿನಲ್ಲಿದ್ದರು. ಅದಾಗ್ಯೂ ಮುಸ್ಲಿಂ, ಕ್ರಿಶ್ಚಿಯನ್, ಸಿಖ್ಖರು ಪ್ರತ್ಯೇಕ ಅಲ್ಪಸಂಖ್ಯಾತ ಧರ್ಮದವರು ಎಂದು ಗಾಂಧೀಜಿ ಅಂದುಕೊಂಡಿದ್ದರು. ಸಹಿಸಿಕೊಂಡಿದ್ದಕ್ಕೆ ಇದೆಲ್ಲಾ ಕಾರಣವಿರಬಹುದು. ಜೊತೆಗೆ ಗಾಂಧೀಜಿ ನಿಮ್ನ ವರ್ಗಗಳು ತನ್ನ ಧರ್ಮಕ್ಕೆ ಸೇರಿದವರು ಎಂದು ಬಲವಾಗಿ ನಂಬಿಕೊಂಡಿದ್ದರು. ಆ ಕಾಲದ ನಿಮ್ನ ವರ್ಗಗಳಾಗಲಿ ಅಥವಾ

ಡಾ.ಅಂಬೇಡ್ಕರ್ ಅವರಾಗಲಿ ತಾವು ಹಿಂದೂ ಧರ್ಮಕ್ಕೆ ಸೇರಿದವರಲ್ಲ ಎಂದು ಅಂದು ಕೊಂಡಿರಲಿಲ್ಲ. ಈ ಹಿನ್ನೆಲೆಯಲ್ಲಿ ನಾವು ನೋಡಬೇಕಾಗಿದೆ. ಇದೆಲ್ಲಾ ನಡೆದದ್ದು ನೂರಾರು ವರ್ಷಗಳ ಹಿಂದೆ. ಬ್ರಿಟೀಷ್ ಆಳ್ವಿಕೆಯ ಕಾಲದಲ್ಲಿ. ನಾವು ಕಾಲದ ಏರಿಳಿತಗಳನ್ನು ಗಮನಿಸದೇ ಆ ಭೂತಕಾಲಕ್ಕೇ ಹೋಗಿ ಸಿಲುಕಿಕೊಂಡರೆ, ವರ್ತಮಾನವನ್ನೂ ಜಟಿಲ ಮಾಡಿಕೊಳ್ಳುತ್ತೇವೆ. ಇಂದು ಏನಾಗಿದೆ? ಭಾರತವು ಸ್ವಾತಂತ್ರ್ಯ ಪಡೆದ ಮೇಲೆ, ಪ್ರತ್ಯೇಕ ಅಲ್ಪಸಂಖ್ಯಾತ ಧರ್ಮಗಳ ಚುನಾಯಕ ಪ್ರಸ್ತಾಪವೇ ಅಪ್ರಸ್ತುತವಾಗಿಬಿಟ್ಟಿತು. ಜೊತೆಗೆ 1909ರಲ್ಲೇ ಪ್ರತ್ಯೇಕ ಚುನಾಯಕ ಪಡೆದಿದ್ದ ಮುಸ್ಲಿಮರನ್ನಂತೂ ಇಂದು ರಾಜಕೀಯ ಪ್ರಾತಿನಿಧ್ಯದಿಂದಲೇ ಹೊರ ಎಸೆಯಲಾಗುತ್ತಿದೆ.

ಬ್ರಿಟಿಷ್ ಆಳ್ವಿಕೆ ಕಾಲದಿಂದ ಇಂದಿಗೂ ಗುಣವಾಗದೆ, ಒಣಗದ ಗಾಯವಾಗಿ ಉಳಿದಿರುವ ಸಂಘರ್ಷ– ಪೂನಾ ಒಪ್ಪಂದ. ಈ ಒಪ್ಪಂದದಿಂದಾಗಿ ಆಗ ಅಂಬೇಡ್ಕರ್ ಬಯಸಿದ್ದಂತೆ ನಿಮ್ನ ವರ್ಗಗಳಿಗೆ, ಬ್ರಿಟಿಷ್ ಇಂಡಿಯಾ ನೇರ ಆಳ್ವಿಕೆಯ ಎಂಟು ಪ್ರಾಂತ್ಯಗಳಲ್ಲಿ ಪ್ರತ್ಯೇಕ ಚುನಾಯಕ ಸಿಗಲಿಲ್ಲ. ಆಗ ಅಂಬೇಡ್ಕರ್ ಅವರು 71 ಪ್ರತ್ಯೇಕ ಚುನಾಯಕಗಳನ್ನು ಡಿಮ್ಯಾಂಡ್ ಮಾಡಿದ್ದರು. ಪೂನಾ ಒಪ್ಪಂದದಂತೆ, ತರುವಾಯ ನಿಮ್ನ ವರ್ಗಗಳನ್ನು ಪ್ರತ್ಯೇಕ ಅಲ್ಪಸಂಖ್ಯಾತರು ಎಂದು ಪರಿಗಣಿಸದೆ, ಎರಡು ಪಟ್ಟು ಪ್ರಾತಿನಿಧ್ಯದ 148 ಮೀಸಲು ಕ್ಷೇತ್ರಗಳು ನಿಮ್ನ ವರ್ಗದ ಸಮುದಾಯಕ್ಕೆ ಸಿಕ್ಕಿತು. ಇದಲ್ಲದೇ ಶೇಕಡ 18 ಪ್ರಾತಿನಿಧ್ಯ ಸೆಂಟ್ರಲ್ ಲೆಜಿಸ್ಲೇಚರ್‌ನಲ್ಲೂ ಸಿಕ್ಕಿತು. ತದನಂತರ ಈ ಸೂತ್ರ ಇಡೀ ಭಾರತಕ್ಕೆ ಅನ್ವಯಿಸಿತು.

ಇಷ್ಟೆಲ್ಲಾ ಆಯ್ತು. ಕೊನೆಗೆ, ಈ ಗಾಂಧಿ ಮತ್ತು ಅಂಬೇಡ್ಕರ್ ಸಂಘರ್ಷ ನಿರುಪಯುಕ್ತವೇ ಎಂದು ಕೇಳಿಕೊಂಡಾಗ– ಖಂಡಿತ ನಿರುಪಯುಕ್ತ ಅಲ್ಲ. ಯಾಕೆಂದರೆ, ಆಗಲೇ ನಿಮ್ನ ವರ್ಗಗಳಿಗೆ ಪ್ರತ್ಯೇಕ ಚುನಾಯಕ( ಖಜಉಚಿಡಿಚಿಣಜ ಇಟಜಛಿಣಉಡಿಚಿಣಜ) ಸಿಕ್ಕಿಬಿಟ್ಟಿದ್ದರೆ ಇದೂ ಕೂಡ ಭಾರತ ಸ್ವಾತಂತ್ರ್ಯ ಪಡೆದ ಮೇಲೆ ಇಲ್ಲವಾಗುತ್ತಿತ್ತು. ಮುಂದೆ ನಾವೇ ಮೀಸಲು ಕ್ಷೇತ್ರಗಳಿಗೆ ಹೋರಾಡಬೇಕಾಗೂ ಬರುತ್ತಿತ್ತೇನೋ. ಆಗ ಆ ಹೋರಾಟ ಬಗೆಹರಿಯದೇ ಹತ್ತಾರು ವರ್ಷಗಟ್ಟಲೆ ಮುಂದುವರಿದಿದ್ದರೆ, ನಮಗೆ ಗಾಂಧಿಯೂ ಇರುತ್ತಿರಲಿಲ್ಲ, ಅಂಬೇಡ್ಕರ್ ಅವರೂ ಇರುತ್ತಿರಲಿಲ್ಲ. ನಾವು ಚಿಂತಿಸಬೇಕು. ಆಯ್ತು, ಆಯಾಯ ಧರ್ಮದವರು, ಆಯಾಯ ಜಾತಿಯವರು, ತಂತಮ್ಮ ಜಾತಿ, ಧರ್ಮಗಳ ಜನಪ್ರತಿನಿಧಿಗಳನ್ನೇ ಆಯ್ಕೆ ಮಾಡಿಕೊಂಡರೆ, ಭಾರತ ಇರಲಿ, ಆಯಾಯ ಜಾತಿ, ಧರ್ಮಗಳಾದರೂ ಉದ್ಧಾರವಾಗುತ್ತವೆಯೇ? ನನಗಂತೂ ಗ್ಯಾರಂಟಿ ಇಲ್ಲ. ಇನ್ನೂ ಹೆಚ್ಚು ಜಟಿಲವೇ ಆಗಬಹುದು. ಈ ಗಳಿಗೆಯಲ್ಲಿ ನಾವು ಗಮನಿಸಬೇಕಾಗಿರುವ ಇನ್ನೊಂದು ಅಂಶವೆಂದರೆ– ಪರಿಶಿಷ್ಟ ಜಾತಿಯೊಳಗೆ ಸೇರಿರುವ ಅಸ್ಪೃಶ್ಯ ಸಮುದಾಯಗಳ ಪ್ರಾತಿನಿಧ್ಯ ಕ್ಷೀಣಿಸುತ್ತಾ ರಾಜಕಾರಣದ ಊರಾಚೆ ಎಸೆಯಲ್ಪಡುತ್ತಿದೆಯಲ್ಲಾ ಈ ಕಡೆಗೆ. ಇದರ ಜೊತೆಗೆ, ಇಂದು ನಮಗೆ ಬೇಕಾಗಿರುವ ಜನಪ್ರತಿನಿಧಿಗಳೆಂದರೆ– ನಡೆನುಡಿಗಳಲ್ಲಿ ಸಮಾಜವಾದಿಗಳು, ಸಮತಾವಾದಿಗಳು, ಜಾತ್ಯತೀತ ಸ್ವಭಾವದವರು, ತಮ್ಮೊಳಗೂ ಸಮತ್ವದವರು ಹಾಗೂ ರಚನಾತ್ಮಕ ಕ್ರಿಯೆಗಳ ನಡೆಯವರು ಅಲ್ಲವೇ? ಹೌದು ಎನ್ನುವುದಾದರೆ ನಾವೀಗ ನೋಡಬೇಕಾದ್ದು– ಚುನಾವಣಾ ಸುಧಾರಣೆ ಕಡೆಗೆ.

ನನ್ನ ಮಾತುಗಳು ಸಾಕು ಅನ್ನಿಸುತ್ತಿದೆ. ನನ್ನೊಳಗಿನ ಸ್ಪಂದನೆಗಳಿಗೆ ಇಲ್ಲಿ ಒಂದಿಷ್ಟು ನುಡಿ ಕೊಡುತ್ತೇನೆ. ಗಾಂಧಿಯವರದು 'ಸರ್ವಜೀವಗಳಲ್ಲಿಯೂ ಭಗವಂತನನ್ನು ಕಾಣುವ' ಉತ್ಕಟ ಚಿಲುಮೆ. ಇದು ನನ್ನಲ್ಲಿ ಅಷ್ಟಾಗಿ ಇಲ್ಲ. ಹಾಗೆ ನೊಂದುಬೆಂದ ಜೀವಿಗಳಿಗೆ ಸ್ಪಂದಿಸಿದ ಡಾ.ಬಾಬಾಸಾಹೇಬ ಅಂಬೇಡ್ಕರ್ ಅವರ ಪ್ರಖರ ವೈಚಾರಿಕತೆ, ಅಧ್ಯಯನಶೀಲತೆ, ಪ್ರಬುದ್ಧತೆಗಳೂ ನನ್ನಲ್ಲಿ ಅಷ್ಟಾಗಿ ಇಲ್ಲ. ಆದರೂ ಇವು ಏನೋ ಅಷ್ಟುಇಷ್ಟು ಒಂದಿಷ್ಟು ಇರಬಹುದು.

ಯಾಕೆಂದರೆ ನನಗೆ ಸಮಸ್ಯೆ ಎದುರಾಗಿ ದಿಕ್ಕು ತೋಚದಾದಾಗ ಒಂದು ಕಡೆ, 'ದೇವರೇ ದೇವರೆ ದಾರಿ ತೋರಿಸು' ಅಂತ ಮೊರೆ ಇಡುತ್ತೇನೆ. ಆಗ ನನ್ನ ಒಳಗಣ್ಣಿಗೆ ಮೂಡುವ ದೇವರು ಅಂದರೆ– ಅದು ಒಂದು ಮರವೂ ಆಗಿರಬಹುದು. ದುಡಿಯುವವರ ಧೂಳಿನ ಪಾದಗಳೋ, ನಡು ಬಗ್ಗಿಸಿ ನಾಟಿಹಾಕುವ ಮಹಿಳೆಯರ ಕೆಸರು ಮೆತ್ತಿದ ಪಾದಗಳೋ, ಸಮಾಜದ ಗಲೀಜು ಮೆತ್ತಿದ ಪೌರ ಕಾರ್ಮಿಕರ ಪಾದಗಳೋ ಅಥವಾ ನಾಲ್ಕು ಚಪ್ಪಡಿ ಕಲ್ಲಿನ ನಡುವೆ ಇಟ್ಟ ಆಕಾರವಿಲ್ಲದ



ಕಲ್ಲಿನಮೂರ್ತಿಯೋ... ಇಂಥವುಗಳು. ಇವುಗಳ ಸ್ಪಂದನಗಳಿಗೆ ನಾನು ಮೊರೆ ಇಡುತ್ತೇನೆ– 'ದಾರಿ ತೋರಿಸು' ಅಂತ. ಜೊತೆಗೆ ಇನ್ನೊಂದು ಕಡೆಗೆ– ಒಂದು ಕೇಸ್ ತೆಗೆದುಕೊಂಡ ಒಬ್ಬ ಪ್ರಾಮಾಣಿಕ ವಕೀಲನಂತೆ ಸಂಬಂಧಿಸಿದ್ದರ ಬಗ್ಗೆ ಓದುತ್ತೇನೆ, ಬಲ್ಲವರಿಂದ ತಿಳಿದುಕೊಳ್ಳುತ್ತೇನೆ, ನನಗೇನೂ ತಿಳಿಯುತ್ತಿಲ್ಲವಲ್ಲ ಎಂದು ಮತ್ತಷ್ಟು ದಿಕ್ಕೆಟ್ಟು ಕೂರುತ್ತೇನೆ. ಸುಸ್ತಾಗಿ ಕೊನೆಗೆ ಅದರ ನಾಡಿ ಹಿಡಿಯಲು ನೋಡುತ್ತೇನೆ. ಒಟ್ಟಾರೆ ಆ ಗಳಿಗೆಯಲ್ಲಿ ನನ್ನ ಗ್ರಹಿಕೆಗೆ ಸಿಕ್ಕಿದಷ್ಟಕ್ಕೆ ತೊದಲ ನುಡಿ ಕೊಡುತ್ತೇನೆ. ನುಡಿಯ ದಿಕ್ಕಲ್ಲಿ ಮುಖ ಮಾಡಿ ನಿಲ್ಲುತ್ತೇನೆ. ಆ ದಿಕ್ಕಲ್ಲಿ ಕಷ್ಟಪಟ್ಟು ಒಂದೊಂದೇ ಹೆಜ್ಜೆ ಇಡಲು ಪ್ರಯತ್ನಿಸುತ್ತೇನೆ.

ಕೊನೆಗೊಂದು ಆಸೆ. ಸುಧಾ ವಿಶೇಷ ಸಂಚಿಕೆಗೆ ನನಗೊಂದು ಪ್ರಶ್ನೆ ಕೇಳಿದ್ದರು– 'ನಿಮ್ಮ ಧರ್ಮ ಯಾವುದು?' ಅಂತ. ಇದಕ್ಕೆ ನನ್ನ ಉತ್ತರ ಹೀಗಿತ್ತು. 'ಬೌದ್ಧ ಮತ್ತು ಲಿಂಗಾಯಿತ ಧರ್ಮಗಳು ಮದುವೆಯಾಗಿ ಹುಟ್ಟುವ ಶಿಶು ಧರ್ಮವೇ ನನ್ನ ಧರ್ಮ' ಅಂದಿದ್ದೆ. ಇಂದು, ಬಹುತ್ವದ ವಿಶಾಲ ಹಿಂದೂ ಧರ್ಮಗಳ ಮೇಲೆ ಅಲ್ಪವಾದ ಏಕಮುಖದ ಚಾತರ್ವರ್ಣದ ಹಿಂದುತ್ವ ಸವಾರಿ ಮಾಡುತ್ತಿರುವಾಗ, ಅದು ಹುಟ್ಟುವುದಕ್ಕೆ ಕಾಲ ಕೂಡಿಬಂದಿರಬಹುದು ಅನ್ನಿಸುತ್ತಿದೆ. ■







# ಜೈಲು ಹಕ್ಕಿ ಗಾಂಧಿ ಮತ್ತು ಟೊಪ್ಪಿಗೆಯ ಸೃಷ್ಠಿ

**ಪ**ಶ್ಚಿಮ ಭಾರತದ ಪೋರ್ ಬಂದರ್ ನ ಮರ್ಚನ್ಟ್ ದಾದಾ ಅಬ್ದುಲ್ಲಾ ಅವರ ಕೇಸ್ ನಡೆಸಲು ಗುಜರಾತಿ ಮತ್ತು ಇಂಗ್ಲೀಷ್ ಭಾಷೆಯನ್ನು ಬಲ್ಲ ಯಂಗ್ ಬ್ಯಾರಿಸ್ಟರ್ ಮೋಹನ್ ದಾಸ್ ಕರಂಚಂದ್ ಗಾಂಧಿ ಒಂದು ವರುಷದ ಅಗ್ರಿಮೆಂಟ್ ಮೇಲೆ ಸೌಥ್ ಆಫ್ರಿಕೆಗೆ ತೆರಳಿದರು. ಅಲ್ಲಿಗೆ ಹೋದ ಮೇಲೆ ಅವರಿಗೆ ಊಹಿಸಲು ಆಗದ ಕಗ್ಗತ್ತಲೆಯ ಜಗತ್ತಿನ ಪರಿಚಯವಾಯಿತು.

ಹೋದ 3 ದಿನದಲ್ಲಿ ಕಾರ್ಯ ನಿಮಿತ್ತ ಕೋರ್ಟ್ ಗೆ ಹೋದಾಗ, ತಲೆಯ ಮೇಲಿದ್ದ ಕಾಥೇವಾಡದ ಪೇಟಾ ತೆಗೆದು ಬಾ ಎಂದು ಬಿಳಿಯ ಜಡ್ಜ್ ತರುಣ ಗಾಂಧಿಗೆ ಕೋರ್ಟ್ ನಲ್ಲಿ ಅವಮಾನ ಮಾಡಿದ.

ಮೊದಲ ದರ್ಜೆಯ ಟಿಕೇಟ್ ಇದ್ದರೂ ಸಹಿತ 'ಭಾರತೀಯ' ಅನ್ನುವ ಕಾರಣಕ್ಕೆ ಡರ್ಬಾನ್ ನಿಂದ ಪ್ರಿಟೋರಿಯಾಗೆ ಹೊರಟ ಸಂದರ್ಭದಲ್ಲಿ 'ಕೂಲಿ ಬ್ಯಾರಿಸ್ಟರ್ ' ಎಂದು ಮೂದಲಿಸಿ, ಪೀಟರ್ ಮಾರಿಟ್ಸ್ ಬರ್ಗ್ ರೈಲು ನಿಲ್ದಾಣದಲ್ಲಿ (1893 ಜೂನ್ 07) ರಾತ್ರಿ 916ಕ್ಕೆ ಟ್ರೇನ್ ಡಬ್ಬಿಯಿಂದ ಹೊರಗೆ ನೂಕಿದರು ಬಿಳಿಯರು. 17 ಸೆಕೆಂಡಿನ ಆ ಅವಮಾನಕರ ಘಟನೆ ಬ್ಯಾರಿಸ್ಟರ್ ಗಾಂಧಿಯನ್ನು ಸತ್ಯಾಗ್ರಹಿ ಗಾಂಧಿಯನ್ನಾಗಿ ಬದಲಾವಣೆ ಮಾಡಿತು.ಪರಿಣಾಮ, ಕೊರೆಯುವ ಚಳಿಯಲ್ಲಿ ಆ ರಾತ್ರಿ ಪೂರ್ತಿ ಕತ್ತಲ ಕೋಣೆಯಲ್ಲಿ ಕಳೆಯಬೇಕಾಯಿತು ತರುಣ ಗಾಂಧಿ ಮೋಹನ್ ದಾಸ್ ರು.ಒಂದು ಅರ್ಥದಲ್ಲಿ ಅಲ್ಲಿಯೇ ಅಂದರೆ ಮಾರಿಟ್ಸ್ ಬರ್ಗ್ ರೈಲು ನಿಲ್ದಾಣವೇ ' ಸತ್ಯಾಗ್ರಹಿ ಗಾಂಧಿ ' ಯ ಉದಯ ಸ್ಥಳವಾಯಿತು.

Birth Place Of Satyagraha.1893 June.07.

ಮರುದಿನ ಚಾರ್ಲ್ಸ್ ಟೌನ್ ಸಿಟಿಯಲ್ಲಿ ಟಾಂಗಾದಲ್ಲಿ ಹೊರಟಾಗ ಬಿಳಿಯ ಸಹ ಪ್ರಯಾಣಿಕನಿಂದ ಮೋಹನ್ ದಾಸ್ ಮೇಲೆ ಮಾರಣಾಂತಿಕವಾಗಿ ಹಲ್ಲೆ ನಡೆಯಿತು. ಕುಡಿಯಲು ನೀರು ಕೊಡಲಿಲ್ಲ, ಇರಲು ಲಾಡ್ಜ್ ಕೊಠಡಿ ಸಿಗಲಿಲ್ಲ. ಭಾರತೀಯ ಅನ್ನುವ ಕಾರಣಕ್ಕಾಗಿ ಆ ದೇಶದಲ್ಲಿ ರಾತ್ರಿ 9 ರ ಮೇಲೆ ನಡೆದಾಡಲು ಅವಕಾಶವೂ ಇರಲಿಲ್ಲ ಅಂತಹ ನೂರಾರು ಅಪಮಾನ – ಅವಮಾನಗಳನ್ನು ಅನುಭವಿಸಿದರು ಬ್ಯಾರಿಸ್ಟರ್ ಗಾಂಧಿ. ಈ ನಡುವೆ 3 ಸಲ (2 ಸಲ ಬಿಳಿಯರಿಂದ ಒಂದು ಸಲ ಭಾರತೀಯನಿಂದ) ಗಂಭೀರ ಹೊಡೆತಗಳನ್ನು ತಿಂದು ಸಾವಿನ ಮನೆಯ ಕದವನ್ನು ತಟ್ಟಿಯೂ ಬಂದರು.

ಈ ಎಲ್ಲ ಸಮಸ್ಯೆಗಳಿಗೆ ದಿಟ್ಟ ಉತ್ತರ ಕೊಡಲೆಂದು

ಅವರೇ ಮೂರು ಸಾವಿರ ಭಾರತೀಯರನ್ನು ಸೇರಿಸಿಕೊಂಡು ಜೋಹಾನ್ಸ್ ಬರ್ಗ್ ನ ಎಂಪೀರಿಯಲ್ ಥಿಯೇಟರ್ ನಲ್ಲಿ ಇಸ್ವಿ 1906 ಸೆಪ್ಟೆಂಬರ್ 11 ರಂದು 'ಸತ್ಯಾಗ್ರಹ' ಅನ್ನುವ ವಿನೂತನ ಪದವನ್ನು ಪ್ರಪಂಚಕ್ಕೆ ಪರಿಚಯಿಸಿದರು ವಕೀಲ ಮೋಹನ್ ದಾಸ್.

ಸತ್ಯಾಗ್ರಹಿ ಗಾಂಧಿ ಅಲ್ಲಿಯ ವಿಕೃತ ಮನಸಿನ ಸರ್ವಾಧಿಕಾರಿ ಧೋರಣೆಯ ಮಿಲ್ಟ್ರಿ ಅಧಿಕಾರಿ ಜನರಲ್ ಸ್ಮಟ್ಸ್ ಮತ್ತು ಆತನ ಸರಕಾರದ ವಿರುದ್ಧ ' ರಕ್ತ ರಹಿತವಾದ ಆಂದೋಲನ ' ವನ್ನು ಶುರು ಮಾಡಿದರು. ಪರಿಣಾಮ ಹಲವಾರು ಸಲ ಗಾಂಧಿ ಶಿಕ್ಷೆಯನ್ನೂ ಅನುಭವಿಸಬೇಕಾಯಿತು. 21 ವರುಷದ ದಕ್ಷಿಣ ಆಫ್ರಿಕೆಯ ಸಂಘರ್ಷದ ಬದುಕಿನಲ್ಲಿ 6 ಸಲ ಬಂಧಿತರಾಗಿ ನ್ಯೂಕಾಸಲ್, ಟ್ರಾನ್ಸ್ ವಾಲ್, ಬ್ಲೋ ಫೌಂಟೇನ್, ಡರ್ಬಾನ್, ಜೋಹಾನ್ಸ್ ಬರ್ಗ್, ಟೀಕ್ ವರ್ಟ್, ವಾಕ್ಸ್ ರಸ್ಟ್ ಹೀಗೆ ವಿವಿಧ ಜೈಲುಗಳಲ್ಲಿ ' ಜೈಲು ಹಕ್ಕಿ ' ' ಆಗಿದ್ದರು ಗಾಂಧಿ.

ಜೈಲಿನಲ್ಲಿ ಇರುವಾಗಲೇ ಸತ್ಯಾಗ್ರಹಿ ರಾಜಕೀಯ ಖೈದಿಯಾಗಿದ್ದ ಗಾಂಧಿ ಸ್ಮಟ್ಸ್ ಕೊಡುತ್ತಿದ್ದ ನೂರಾರು ತೊಂದರೆಗಳನ್ನು ಅನುಭವಿಸಿದರು. ಊಟಕ್ಕೆಂದು ಕೊಡುತ್ತಿದ್ದ ಹಸಿರು ತರಕಾರಿ ಸೊಪ್ಪು ಇಲ್ಲದಯೇ ಎಷ್ಟೋ ದಿನಗಳನ್ನು ಕಳೆದರು.

ಖಾರಾ ಉಪ್ಪು ಹಚ್ಚದ ಬರೀ ಒಣ ಹುರುಳಿ ಕಾಳುಗಳನ್ನು ತಿಂದರು. ಅರೆಬೆತ್ತಲೆಯಾಗಿ ಪ್ರತಿದಿನ ಜೈಲಿನ ಸುತ್ತ ಸುತ್ತುಗಳನ್ನು ಹಾಕುತ್ತಿದ್ದರು.ಬೆಳಕಿಲ್ಲದ ಚಿಕ್ಕದಾದ ಗಲೀಜು ಕೋಣೆಯಲ್ಲಿ ಸೊಳ್ಳೆಗಳ ಜೊತೆಗೆ ಇರುತ್ತಿದ್ದರು.

ಯಾವುದೇ ಪೇಪರ್ ಓದಲು, ಬರೆಯಲು ಅವಕಾಶ ಇರಲಿಲ್ಲ ಆದರೂ ಎಲ್ಲವನ್ನು ಸಹಿಸಿಕೊಂಡರು.

ಜೈಲಿನ ಶೌಚಾಲಯಗಳನ್ನು ಒಬ್ಬರೇ ಸ್ವಚ್ಛ ಮಾಡುತ್ತಿದ್ದರು.

ಕೊಲೆ ಮಾಡಿ ಬರುತ್ತಿದ್ದ ನಿಗ್ರೋ ಖೈದಿಗಳ ಜೊತೆಗೆ ಎಷ್ಟೋ ದಿನಗಳನ್ನು ಕಳೆದರು.

ಹೀಗೆ ಜೈಲು ದಿನಗಳು ತುಂಬಾ ಭಯಾನಕವಾಗಿದ್ದವು. ಇವುಗಳ ನಡುವೆಯೂ ಗಾಂಧಿ ಹಲವಾರು ಉದ್ಯೋಗಗಳನ್ನು ಕಲಿತರು, ಚರ್ಮ ಹದ ಮಾಡುವುದು, ಪಾದರಕ್ಷೆಗಳನ್ನು ತಯಾರಿಸುವುದು. ಹಾಗೆಯೇ ಟೊಪ್ಪಿಗೆಗಳನ್ನು ಹೊಲೆಯುವುದು.

(ಒಂದು ಸಂದರ್ಭದಲ್ಲಿ ಚಪ್ಪಲಿ ಜೋಡುಗಳನ್ನು ಮಾಡಿ ಕೊಟ್ಟು ಬಂದರು ಗಾಂಧಿ, ಸ್ಮಟ್ಸ್ ಗೆ ಕೊಡುಗೆಯಾಗಿ ಅದೊಂದು ಬೇರೆ ಕತೆ ಇದೆ)

ಕೆಲವೊಮ್ಮೆ ಭಾರತೀಯ ಮತ್ತು ನಿಗ್ರೋ ಖೈದಿಗಳ ಜೊತೆಗೆ ಸೇರಿಕೊಂಡು ಕಲ್ಲುಗಳನ್ನು ಒಡೆಯುತ್ತಿದ್ದರು. ಗುಂಡಿಗಳನ್ನು ತೋಡಿ ಗಿಡಗಳನ್ನು ಹಚ್ಚುತ್ತಿದ್ದರು.

ಅಂದು ದಕ್ಷಿಣ ಆಫ್ರಿಕೆಯ ಜೈಲಿನಲ್ಲಿ ಕಲಿತ ವಿದ್ಯೆಯೇ ಟೊಪ್ಪಿಗೆಗಳ ತಯಾರಿಕೆ . ಬಿಳಿ ಬಟ್ಟೆಯ, ಆಯತಾಕಾರದ ಹಿಂದೆ – ಮುಂದೆ ಚೂಪಾಗಿದ್ದ ಆ ಟೊಪ್ಪಿಗೆಯೇ ಇತಿಹಾಸದಲ್ಲಿ ಪ್ರಸಿದ್ಧಿಯಾದ ' ಗಾಂಧಿ ಟೊಪ್ಪಿಗೆ'.

21 ವರುಷ ದಕ್ಷಿಣ ಆಫ್ರಿಕೆಯ ಹೋರಾಟವನ್ನು ಮುಗಿಸಿಕೊಂಡು ಜನವರಿ 09.1915ರಲ್ಲಿ ಭಾರತಕ್ಕೆ ಬಂದರು ಗಾಂಧೀಜಿ.ಬಂದವರೇ ಬಾಲ ಗಂಗಾಧರ್ ತಿಲಕ್ ರನ್ನು ಭೇಟಿ ಮಾಡಿದರು, ಲೋಕಮಾನ್ಯರು ಪುಣೆಯಲ್ಲಿ ಗಾಂಧಿ ದಂಪತಿಗಳಿಗೆ ಹೃದಯ ಸ್ಪರ್ಶಿಯಾಗಿ ಸತ್ಕರಿಸಿದರು. ತದ ನಂತರ, ಸೌಮ್ಯವಾದಿಗಳ ಗುಂಪಿನ ನಾಯಕರಾದ ಗೋಖಲೆಯವರನ್ನು ಭೇಟಿ ಮಾಡಿದರು.

ಗೋಖಲೆಯವರ ಅಣತಿಯಂತೆ ಒಂದು ವರುಷ ಭಾರತವನ್ನು ಸುತ್ತಿದ್ದರು. ಪೂರ್ಣ ದೇಶವನ್ನು ಪರ್ಯಟನೆ ಮಾಡಿ, ಆಂಗ್ಲರ ಒಡೆದು ಆಳುವ ನೀತಿಯನ್ನು, ಮತೀಯ ಐಕ್ಯತೆ ಇಲ್ಲದಿರುವುದನ್ನು, ಅಸ್ಪೃಶ್ಯತಾ ಆಚರಣೆಯನ್ನು, ಸ್ತ್ರೀ ಗೆ ಸಮಾನತೆ ಇಲ್ಲದಿರುವುದನ್ನು, ಬಡತನವನ್ನ, ಜಾತಿ ಧರ್ಮ ಸಮುದಾಯದ ಸಮಸ್ಯೆಗಳನ್ನು ಮತ್ತು ವಿವಿಧ ಪ್ರಾಂತ್ಯದ ಮುಗ್ದ ಜನರನ್ನು ಅರ್ಥ ಮಾಡಿಕೊಂಡರು, ಇದೆಲ್ಲವನ್ನು



ಅರಿತುಕೊಂಡ ಮೇಲೆಯೇ, ಆಂಗ್ಲರ ವಿರುದ್ಧ ಅಹಿಂಸಾತ್ಮಕ ನೆಲೆಗಟ್ಟಿನಲ್ಲಿ ಸರ್ವೋದಯ ತತ್ವದ ಮೇಲೆ ಸರ್ವರನ್ನು ಸೇರಿಸಿಕೊಂಡು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಗಾಂಧಿ ಧುಮುಕಿದರು,

ಮುಂದೆ ಭಾರತದ ಸ್ವಾತಂತ್ರ್ಯ ಸಂಗ್ರಾಮದ ಮುಂಚೂಣಿ ನೇತಾರರೂ ಆದರು ಮೋಹನ್ ದಾಸ್.

ಆ ಸಂದರ್ಭದಲ್ಲಿ ದೇಶದ ಕೋಟಿ ಕೋಟಿ ಜನ ಸತ್ಯಾಗ್ರಹಿಗಳು ಬಿಳಿಯ ಟೊಪ್ಪಿಗೆಯನ್ನು ಹಾಕಿಕೊಂಡೇ ಮಹಾತ್ಮನ ಹಿಂದೆ ಸಾಗಿದರು . ಸಾಗರದಂತೆ ಹರಿದು ಬರುತ್ತಿದ್ದ ಜನ ಸಮೂಹವನ್ನು , ಅವರು ಧರಿಸುತ್ತಿದ್ದ ಬಿಳಿ ಟೊಪ್ಪಿಗೆಯನ್ನು ಕಂಡು ಆಂಗ್ಲ ಆಳರಸರಲ್ಲಿ ಭಯವುಂಟು ಆದದ್ದಂತೂ ದಿಟ.

ಭಾರತದಲ್ಲಿ ಗಾಂಧಿ ಮಾಡಿದ ಮೊದಲ ಸತ್ಯಾಗ್ರಹ 1917ರ ಚಂಪಾರಣ್ಯ, 1918ರ ಖೇಡಾ, ಅಹಮದಾಬಾದ್ ನ ಹತ್ತಿ ಗಿರಣಿ ಮಾಲೀಕರ ವಿರುದ್ಧ ನಡೆದ ಚಳವಳಿ, 1919ರ ರೌಲತ್ ಆಕ್ಟ್ ವಿರುದ್ಧದ ಸ್ಟ್ರೈಕ್ ಡೇ, 1920ರ ಅಸಹಕಾರ ಚಳವಳಿ , 1923 ರ ಬೋರ್ಸಾದ್ ಸತ್ಯಾಗ್ರಹ, 1924 ರ ಬೆಳಗಾವಿಯಲ್ಲಿ ಜರುಗಿದ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಮಹಾ ಅಧಿವೇಶನ, 1927 ರ ಸೈಮನ್ ಗೋ ಬ್ಯಾಕ್ಚಳವಳಿ ,1928ರ ಬಾರ್ಡೋಲಿ ಸತ್ಯಾಗ್ರಹ, 1929 ರ ಲಾಹೋರ್ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಅಧಿವೇಶನ , 1930 ರಲ್ಲಿ ನಡೆದ ಐತಿಹಾಸಿಕ ದಾಂಡಿಯಾತ್ರೆ – ಉಪ್ಪಿನ ಸತ್ಯಾಗ್ರಹ, 1933 ರಲ್ಲಿ ರಾಷ್ಟ್ರವ್ಯಾಪಿ ಹಮ್ಮಿಕೊಂಡ ಸಾಮಾಜಿಕ ಚಳವಳಿಯಾದ ಅಸ್ಪೃಶ್ಯತಾ ನಿವಾರಣಾ ಯಾತ್ರೆ, ಕೇರಳದ ವೈಕೊಂ ಸತ್ಯಾಗ್ರಹ, 1942 ರಲ್ಲಿ ಕರೆ ನೀಡಿದ ' ಕ್ವಿಟ್ ಇಂಡಿಯಾ ಚಳವಳಿ ' ಅಂದು 'ರಾಷ್ಟ್ರಪಿತ' ಗಾಂಧಿ ಕರೆ ಕೊಡುತ್ತಿದ್ದ ಚಳವಳಿ ಸತ್ಯಾಗ್ರಹಗಳಲ್ಲಿ ಭಾರತೀಯರು ಬಿಳಿ ಬಣ್ಣದ ಗಾಂಧಿ ಟೊಪ್ಪಿಗೆಯನ್ನು ಹಾಕಿಕೊಂಡೇ ಹೋರಾಟಕ್ಕೆ ಇಳಿಯುತ್ತಿದ್ದರು.

ಹೀಗೆ ಗಾಂಧಿ ಟೊಪ್ಪಿಗೆಗಳು ಬ್ರಿಟಿಷ್ ರನ್ನು ಕಂಗಾಲು ಮಾಡಿದ್ದವು. ಮುಂದೆ ಅವು ಜಗತ್ ಪ್ರಸಿದ್ಧಿಯನ್ನೂ ಪಡೆದವು.

ಸ್ವಾತಂತ್ರ್ಯ ಹೋರಾಟದಲ್ಲಿ ಖಾದಿ ಮತ್ತು ಗಾಂಧಿ ಟೊಪ್ಪಿಗೆಗಳನ್ನು ಹೋರಾಟಗಾರರು ಸ್ವದೇಶಿ ಸಂಕೇತವಾಗಿ ಧರಿಸುತ್ತಿದ್ದರು ಮತ್ತು ಅವುಗಳು ಹೆಮ್ಮೆಯ ಪ್ರತೀಕವೂ ಆಗಿದ್ದವು.

ಈ ಗಾಂಧಿ ಟೊಪ್ಪಿಗೆಗಳ ಪ್ರಭಾವ ಭಾರತಕ್ಕಷ್ಟೇ ಸೀಮಿತಗೊಳ್ಳಲಿಲ್ಲ . ದೂರದ ಅಮೇರಿಕೆಗೂ ಹಬ್ಬಿಕೊಂಡಿತು.

ಮಾನವ ಹಕ್ಕುಗಳ ಹೋರಾಟಗಾರ ಮತ್ತು ಮಹಾತ್ಮ ಗಾಂಧಿಯವರ ಅಪ್ಪಟ ಅನುಯಾಯಿಯಾದ ಡಾ.ಮಾರ್ಟಿನ್ ಲೂಥರ್ ಕಿಂಗ್ ಜ್ಯೂನಿಯರ್ ಅಮೇರಿಕೆಯಲ್ಲಿ 60 ರ ದಶಕದಲ್ಲಿ ನಡೆಸಿದ' ವಾಷಿಂಗ್ಟನ್ ಮಾರ್ಚ್ ನಲ್ಲಿ '

(ಗಾಂಧೀಜಿಯವರು ಇಂಡಿಯಾದಲ್ಲಿ ನಡೆಸಿದ ಸಾಲ್ಟ್ ಮಾರ್ಚ್ ಮಾದರಿಯಲ್ಲಿ ) ಎಲ್ಲ ಹೋರಾಟಗಾರರು ನಮ್ಮ ' ಗಾಂಧಿ ಟೊಪ್ಪಿಗೆ' ಗಳನ್ನೇ ಧರಿಸಿ 'ಶಾಂತಿಮಾರ್ಗ' ದಲ್ಲಿ ಸಾಗಿ ಸತ್ಯಾಗ್ರಹ ಮಾಡಿದರು.

ಅವರ ಅಹಿಂಸಾತ್ಮಕ ಹೋರಾಟಕ್ಕೆ ಮಣಿದ ಅಮೇರಿಕೆಯ ಬಿಳಿಯ ಸರಕಾರ ಕರಿಯರಿಗೆ ಘನತೆಯ ಬದುಕನ್ನು ಮತ್ತು ದನಿ ಇಲ್ಲದವರಿಗೆ ಮಾತನಾಡುವ ಹಕ್ಕನ್ನು ಕಲ್ಪಿಸಿತು. ಆ ಹೋರಾಟದ ಯಶಸ್ಸನ್ನು ಕಂಡ ಮೇಲೆ ಪ್ರಪಂಚದ ಪತ್ರಕರ್ತರು ಪ್ರಶ್ನೆಗಳನ್ನು ಕೇಳಿದರು ; ನನ್ನ ಹೋರಾಟಕ್ಕೆ, ಈ ನಮ್ಮ ನೈತಿಕ ಬಲಕ್ಕೆ ಈ ನಮ್ಮ ಸಾತ್ವಿಕ ಶಕ್ತಿಗೆ ಮೂಲ ಪುರುಷರಾದವರು ಭಾರತದ ರಾಷ್ಟ್ರಪಿತ ಮಹಾತ್ಮ ಗಾಂಧಿಯವರು .

ಅವರೇ ಈ ಜಯಕ್ಕೆ ನಮಗೆ ಸ್ಫೂರ್ತಿ ನೀಡಿದರು, ನಾನವರ ಅಪ್ಪಟ ಅನುಯಾಯಿ' ಎಂದು,

ಅಮೇರಿಕೆಯ ಗಾಂಧಿ ಅನಿಸಿಕೊಂಡ ಡಾ. ಮಾರ್ಟಿನ್ ಲೂಥರ್ ಕಿಂಗ್ (ಜೂನಿಯರ್) ಪ್ರತಿ ಉತ್ತರವಾಗಿ ಹೇಳಿದರು.

**ಸಂಗ್ರಹ ಲೇಖನ – ನೇತಾಜಿ ಗಾಂಧಿ** ■

# ವಿಶ್ವವ್ಯಾಪಿ ಬಾಪೂ

## ಭಾರತದ ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರ ಪ್ರತಿಮೆ ದೂರದ ಅಬುದಾಬಿಯಲ್ಲಿ ಲೋಕಾರ್ಪಣೆ.

ಪ್ರಪಂಚದಾದ್ಯಂತ ನೂರಕ್ಕೂ ಹೆಚ್ಚು ರಾಷ್ಟ್ರಗಳಲ್ಲಿ ಭಾರತದ ರಾಷ್ಟ್ರಪಿತನ ಪ್ರತಿಮೆಗಳಿವೆ. ಅದರಲ್ಲೂ ಮುಖ್ಯವಾಗಿ ವಿಶ್ವ ಸಂಸ್ಥೆಯ ಕೇಂದ್ರ ಕಚೇರಿಯ ಆವರಣದಲ್ಲಿ ಬಾಪೂ ಪ್ರತಿಮೆ ಅನಾವರಣಗೊಂಡಿದೆ. (ಡಿಸೆಂಬರ್ 14.2022)

ಯಾವುದೇ ಜಾತಿ, ಧರ್ಮ, ಸಮುದಾಯ , ವರ್ಣ ವರ್ಗದ ಪೊರೆಯನ್ನು ಕಳಚಿ ಸರ್ವೋದಯ ತತ್ವ ದಲ್ಲಿ ನಂಬಿಕೆಯಿರಿಸಿ, ಮಾನವ ಪ್ರೀತಿಯೇ ಎಲ್ಲಕ್ಕಿಂತ ಶ್ರೇಷ್ಠ, ಸರ್ವರೂ ನನ್ನವರೆಂದೂ ಪ್ರೀತಿಸಿ, ಅವರ ಅಭ್ಯುದಯಕ್ಕಾಗಿ ಜೀವನ ಪೂರ್ತಿ ಶ್ರಮಿಸಿ ಲೋಕಖ್ಯಾತಿ ಗಳಿಸಿದ ಮಹಾನ್ ನೇತಾರ ಮಹಾತ್ಮ ಗಾಂಧೀಜಿಯವರು.

ತಮ್ಮ ಜೀವಮಾನದಲ್ಲಿ ಬಾಪೂಜಿ ಒಮ್ಮೆಯೂ ಭೇಟಿ ನೀಡದ ದೇಶ ಅಮೆರಿಕಾದಲ್ಲಿ ಹಲವಾರು ಕಡೆ ಗಾಂಧೀಜಿಯ ಪ್ರತಿಮೆಗಳು ಇವೆ. ಇಡೀ ಜಗತ್ತಿನಲ್ಲಿ ಭಾರತ, ದಕ್ಷಿಣ ಆಫ್ರಿಕ ಬಿಟ್ಟರೇ ಅತಿ ಹೆಚ್ಚು ಪ್ರತಿಮೆಗಳು ಇರುವುದು ಅಮೆರಿಕೆಯಲ್ಲಿಯೇ ಎನ್ನುವುದು ಒಂದು ವಿಶೇಷ .

ಮಹಾತ್ಮನನ್ನು ಎಂದೂ ನೋಡದ, ಅವರ ಜೊತೆಗೂ ಇರದ, ಅಮೇರಿಕ ದೇಶದ ರಾಷ್ಟ್ರನಾಯಕರಿಗೆ ನಮ್ಮ ರಾಷ್ಟ್ರಪಿತನೇ ಆದರ್ಶ ಮೂರ್ತಿ ಮತ್ತು ಸ್ಫೂರ್ತಿ. ಕಪ್ಪು ಜನರ ಹೋರಾಟಗಾರ ಡಾ.ಮಾರ್ಟಿನ್ ಲೂಥರ್ ಕಿಂಗ್ ಜೂನಿಯರ್ , ರೈತ ಹೋರಾಟಗಾರ ಸೀಜರ್, ಅಮೆರಿಕೆಯ ಮಾಜಿ ಅಧ್ಯಕ್ಷ ಬರಾಕ್ ಒಬಾಮಾ ಇವರಲ್ಲಿ ಪ್ರಮುಖರು . ದಕ್ಷಿಣ ಆಫ್ರಿಕಾದ ನೆಲ್ಸನ್ ಮಂಡೇಲಾ, ಖ್ಯಾತ ವಿಜ್ಞಾನಿ ಐನ್ ಸ್ಟಿನ್, ಹೆಸರಾಂತ ಪತ್ರಕರ್ತರಾದ ಪರ್ಲ್ ಬುಕ್, ಬರ್ಕ್ ವೈಟ್,ಲೂಯಿಸ್ ಫಿಶರ್, ನೊಬೆಲ್ ವಿಜೇತರಾದ ರೋಮಾ ರೋಲಾ, ಡೇಸ್ಮಂಡ್ ಟುಟು ಆಲ್ಬರ್ಟ್ ಲ್ಯೂತುಳಿ, ಬರ್ಮಾದ ಆಂಗ್ ಸ್ಯಾನ್ ಸೂಕಿ ಹೀಗೆ ಗಾಂಧೀಜಿಯವರನ್ನು ಮೆಚ್ಚುವ ನೂರಾರು ಸಾಧಕರ, ನಾಯಕರ ಹೆಸರುಗಳನ್ನು ಹೇಳುತ್ತಾ ಹೋಗಬಹುದು.

ಮಹಾತ್ಮ ಗಾಂಧಿ ಇಡೀ ಜಗತ್ತಿನಲ್ಲಿ ಅತಿ ಹೆಚ್ಚಿನ ಪ್ರತಿಮೆಗಳನ್ನು ಹೊಂದಿರುವ ವಿಶ್ವ ನೇತಾರ. ಭಾರತವಷ್ಟೇ ಅಲ್ಲದೇ ಜಗತ್ತಿನಾದ್ಯಂತ ಪರಿಚಿತವಿರುವ ಏಕೈಕ ನಾಯಕ ನಮ್ಮ ರಾಷ್ಟ್ರಪಿತ ಗಾಂಧೀಜಿಯವರು ಎನ್ನುವುದೊಂದು ಹೆಮ್ಮೆ

# Websites on Mahatma Gandhi, Peace, Nonviolence and related topics

**» www.gujaratvidyapith.ac.in**

This is the official site of Gujarat Vidyapith, Ahmedabad. Gujarat Vidyapith founded by Mahatma Gandhiji in the year 1920. Mahatma Gandhiji was Founder & Former Chancellor of Gujarat Vidyapith.

**» www.gandhiashramsevagram.org**

Official website of Sevagram Ashram, Wardha, India which was founded by Mahatma Gandhi in 1936. Including information for visitors to visit and stay at the Ashram and Mahatma Gandhi's life and work.

**» www.gandhiserve.org**

It is a superb site on Mahatma Gandhi, including information about books on and by Gandhi in an on-line Mahatma Gandhi Book store which also has an online sale of bags, t-shirts, CD-ROMs, statues and more, all pertaining to Gandhi. Along with information about Gandhi Serve Foundation, there are also links to education, human rights, MK Gandhi, nonviolence and more

**» www.gandhipeacefoundation.org**

The foundation seeks to create an environment for study and research on the teaching and research journal in Gandhian Studies

**» www.transnational.org**

This is the site by the Transnational Foundation for Peace & Future Research, presents analyses, ideas, columns and debates on the present situation on the present world scenario pertaining to nonviolence, peace and harmony

**» www.gandhitoday.org**

Gandhi Today focuses just not on Gandhi but his relevance in today's times. Gandhi TODAY endeavours to inspire its readers to constructive living, not just wishy-washy worshipping, quotating or gossiping. It is the Gandhian concept of living, i.e. Ahimsa (nonviolence, Satyagraha (Nonviolent Action), Swadeshi (Self-reliance), Swaraj (Self-Rule) and above all, Sarvodaya (the welfare of all) and the difficult task of applying this concept to our present violent based society, that has top priority on this site. The site, both in Swedish and English, contains many articles, updates on nonviolence and its relevance in today's times world over



**» www.nonviolence.org**

Nonviolence.org is one of the most highly-visible and visited peace websites, being highly ranked through Gulf War II. The mission of the Nonviolence.org mission is featuring the best writing and analysis from a nonviolent viewpoint. The site also has a discussion board, various articles on issues related to peace and nonviolence with many links on other nonviolent sites

# ಗಾಂಧಿ ಮತ್ತು ಕರ್ನಾಟಕ

**ಭಾಗ – 14**

ಗಾಂಧಿ ಮತ್ತು ಕರ್ನಾಟಕದ ನಡುವೆ ಒಂದು ಮಧುರ ಸಂಬಂಧವಿದೆ. ಕರ್ನಾಟಕದ ಜೊತೆಗಿನ ಗಾಂಧೀಜಿಯವರ ಒಡನಾಟ ಮತ್ತು ಸಂಬಂಧವನ್ನು ಇತ್ತೀಚಿನ ಪೀಳಿಗೆಯ ಓದುಗರಿಗೆ ತಲುಪಿಸುವ ಉದ್ದೇಶ ನಮ್ಮದು. ಅದಕ್ಕಾಗಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಂಸ್ಥೆಯ ಪ್ರಕಟಣೆಯಾದ **"ಗಾಂಧಿ ಮತ್ತು ಕರ್ನಾಟಕ"** ಕೃತಿಯನ್ನು ಸರಣಿ ಮಾದರಿಯಲ್ಲಿ ಪ್ರತಿ ತಿಂಗಳು ಬಾಪು ಪ್ರಪಂಚ ಪತ್ರಿಕೆಯಲ್ಲಿ ಪ್ರಕಟಿಸುತ್ತಿದ್ದೇವೆ.



ಭಾರತದ ಸ್ವಾತಂತ್ರ್ಯ ಚಳವಳಿಗೆ ಕರ್ನಾಟಕದ ಕೊಡುಗೆ ಅಪಾರವಾದುದು,ಅದರಲ್ಲಿಯೂ ವಿದುರಾಶ್ವಥ ದುರಂತ, ಶಿವಪುರ ಧ್ವಜ ಸತ್ಯಾಗ್ರಹ ಹಾಗೂ 1982ರ ನಂತರದ (ಮೈಸೂರು ಚಲೋ ಚಳವಳಿಗಳು) ಕರ್ನಾಟಕದ ಕೊಡುಗೆಯೆಂದೆ ಭಾವಿಸುವ ಮಹತ್ವಪೂರ್ಣ ಘಟನೆಗಳಾಗಿ ಇತಿಹಾಸದಲ್ಲಿ ದಾಖಲಾಗಿವೆ . ಅದಲ್ಲದೆ ಗಾಂಧೀಜಿಯವರು ವಿಶ್ರಾಂತಿಗಾಗಿ ಕರ್ನಾಟಕದ ನಂದಿ ಗಿರಿಧಾಮವನ್ನು ಆಯ್ಕೆ ಮಾಡಿಕೊಂಡಿದ್ದು ಕರ್ನಾಟಕದ ಸುದೈವ. ಅಲ್ಲಿ ಅವರ ಆರೋಗ್ಯ ಸುಧಾರಿಸಿದ್ದು. ಗಾಂಧೀಜಿಯವರು ಕರ್ನಾಟಕಕ್ಕೆ 1915ರಿಂದ 1937ರ ಅವಧಿಯಲ್ಲಿ 19 ಸಲ ಆಗಮಿಸಿದ್ದಾರೆ. ಅವರು ಅಸಹಕಾರ ಆಂದೋಲನಕ್ಕಾಗಿ, ಖಾದಿ ಸ್ವದೇಶಿ ಆಂದೋಲನಕ್ಕಾಗಿ, ಕಾಂಗ್ರೆಸ್ ಅಧಿವೇಶನಕ್ಕಾಗಿ, ನಿಧಿ ಸಂಗ್ರಹಕ್ಕಾಗಿ, ಖಾದಿ ಪ್ರಚಾರಕ್ಕಾಗಿ, ಹರಿಜನ ನಿಧಿ ಸಂಗ್ರಹಕ್ಕಾಗಿ, ಹುದಲಿ ಸಮ್ಮೇಳನಕ್ಕಾಗಿ ಕರ್ನಾಟಕದ ನಾನಾ ಭಾಗಗಳಲ್ಲಿ ಪ್ರವಾಸ ಕೈಗೊಂಡಿದ್ದಾರೆ. ಈ ಎಲ್ಲಾ ದಾಖಲೆಗಳನ್ನು ಗಾಂಧೀಜಿಯವರೇ ಸ್ವತಃ ತಮ್ಮ ' ಹರಿಜನ ' ಮತ್ತು ' ಯಂಗ್ ಇಂಡಿಯಾ ' ಪತ್ರಿಕೆಗಳಲ್ಲಿ 1924, 1927, 1936, ಹಾಗೂ 1937ರ ಅವಧಿಯಲ್ಲಿ ಪ್ರಕಟಿಸಿದ್ದಾರೆ.

ಈ ಸಮಗ್ರ ದಾಖಲೆಗಳು ' ಗಾಂಧೀ ಮತ್ತು ಕರ್ನಾಟಕ ' ಕೃತಿಯಲ್ಲಿ ದಾಖಲಾಗಿವೆ. ಹಾಗೂ ಕರ್ನಾಟಕದ ಅಂದಿನ ಮುಂಚೂಣಿ ನಾಯಕರ ಪತ್ರ ವ್ಯವಹಾರಗಳು ಅಂದಿನ ಛಾಯಾಚಿತ್ರಗಳು ಸಹ ದಾಖಲಾಗಿವೆ. ಅಂದಿನ ಸ್ವಾತಂತ್ರ್ಯ ಹೋರಾಟಗಾರರ ನೆನಪುಗಳು ಕೂಡಾ ಈ ಕೃತಿಯಲ್ಲಿ ಸೇರ್ಪಡೆಯಾಗಿವೆ. ಅಲ್ಲದೆ ಕರ್ನಾಟಕಕ್ಕೆ ಗಾಂಧೀಜಿಯವರು ಬಂದಿದ್ದ ಹಾಗೂ ನಡೆದ ಘಟನೆಗಳ ಅವಲೋಕನವನ್ನು ಸ್ವಾತಂತ್ರ್ಯ ಹೋರಾಟಗಾರರು ತಮ್ಮ ನೆನಪಿನ ಬುತ್ತಿಯಿಂದ ತೆಗೆದಿಟ್ಟಿದ್ದಾರೆ. ಅವುಗಳೆಲ್ಲವನ್ನೂ ಸಿದ್ದವನಹಳ್ಳಿ ಕೃಷ್ಣಶರ್ಮರ ಮುಂದಾಳತ್ವದಲ್ಲಿ ಅಂದಿನ ಸಂಗ್ರಹಕಾರರು ಸಂಗ್ರಹಿಸಿದ್ದಾರೆ. ಕರ್ನಾಟಕದ 44 ಮಹನೀಯರು ತಮ್ಮ ನೆನಪುಗಳ ಬುತ್ತಿಯಿಂದ ಗಾಂಧೀಜಿಯವರ ಕರ್ನಾಟಕದ ಭೇಟಿಯಲ್ಲಿ ನಡೆದ ಘಟನೆಗಳನ್ನು ಸವಿಸ್ತಾರವಾಗಿ ದಾಖಲಿಸಲು ನೆರವಾಗಿದ್ದಾರೆ. ಅವರ ಮಾತುಗಳು ಇಂದಿಗೂ ಈ ಕೃತಿಯನ್ನು ಓದುವಾಗ ಒಂದು ಚಿತ್ರಣವನ್ನು ಓದುಗರ ಸ್ಮೃತಿಪಟಲದಲ್ಲಿ ಮೂಡಿಸುತ್ತವೆ.

(ಹಿಂದಿನ ಸಂಚಿಕೆಯಿಂದ)

ಭೋಪಟಕರರ ಭಾಷಣ ಕೇಳಿ ನನಗೆ ಸಂತೋಷವೂ ಆಯಿತು ಆಶ್ಚರ್ಯವೂ ಆಯಿತು. ಹಿಂದೂ ಧರ್ಮ ನಾಶವಾಗಬೇಕು ಎಂದರೆ ಮನುಷ್ಯರನ್ನು ಅಸ್ಪೃಶ್ಯರನ್ನಾಗಿ ನಡೆಸಿಕೊಳಿರಿ ಎಂದರು. ನನಗೆ ಬಹಳ ಸಂತೋಷವಾಯಿತು. ಹಿಂದೂ ಧರ್ಮದಲ್ಲಿ ಈಗ ರೂಢಿಯಲ್ಲಿರುವ ಅಸ್ಪಶ್ಯತೆಗೆ ಯಾವ ಆಧಾರವೂ ಇಲ್ಲ ಎಂದು ಮೂವರು ಶಾಸ್ತ್ರಿಗಳು ಈಗ ನಿಮಗೆ ಹೇಳಿದ್ದಾರೆ. ಹಿಂದೂಗಳು ಮುಸ್ಲಿಂರು ಪರಸ್ಪರ ಶತ್ರುಗಳಾಗಬಾರದು , ,ಭ್ರಾತೃಗಳಾಗಬೇಕು ಎಂಬಂತೆಯೇ ಇದು. ಶೌಕತ್ ಆಲಿ ಹೇಳಿದ್ದನ್ನು ಕೇಳಲಿಲ್ಲವೇ? ಲಜಪತ್ ರಾಯರು ಏನು ಹೇಳಿದ್ದರು? ಜಾಫರ್ ಆಲಿ ಖಾನರು ಈ ಆಕ್ಷೇಪ ಎತ್ತಿದರು. ಆಕ್ಷೇಪಿಸಬೇಕಾದ್ದು ಅದರಲ್ಲಿ ಏನೂ ಇಲ್ಲ. ಇವರೇನು ಭಾರತಕ್ಕೆ ಶತ್ರು ಅಲ್ಲ. ಯಾರನ್ನೂ ನೀವು ಶತ್ರು ಎಂದು ಭಾವಿಸಬಾರದು . ವೈರಿಯನ್ನೂ ಕೂಡ ಸೋದರ ಆಗಿ ಮಾಡಬೇಕು ಎನ್ನುವ ಪ್ರೇರಣೆ ನಿಮ್ಮ ಹೃದಯದಲ್ಲಿರಬೇಕು.

ಲಾಲಾಜಿ ಒಂದು ತತ್ವವನ್ನು ಮಂಡಿಸಿದ್ದಾರೆ. ಇದು ಇಡೀ ಮಾನವ ಜಾತಿಗೆ ಸೇರಿದ ಪ್ರಶ್ನೆ ; ಒಂದು ಧರ್ಮಕ್ಕಲ್ಲ. ಹಿಂದೂ ಒಬ್ಬ ಹುಚ್ಚನಾದರೆ ಮುಸಲ್ಮಾನರು ಅವನನ್ನು ವಿರೋಧಿಸಬೇಡವೇ ಎಂದು ಕೇಳಿದರು. ಮುಸಲ್ಮಾನರು ಕೃಷ್ಣನನ್ನೂ, ರಾಮನನ್ನೂ ಬೈದರೆ, ಹಿಂದೂಗಳು ಪೈಗಂಬರರನ್ನು ಬೈಯಬೇಡವೇ ಎಂದು. ಈ ಮಾತನ್ನು ಕ್ಷಮಿಸುವುದರ ಮೂಲಕ ತೀರ್ಮಾನಿಸಲಾಗದಿದ್ದರೆ ನ್ಯಾಯಾಲಯಕ್ಕೆ ಪಂಚಾಯತಿಗೆ ಹೋಗಿರುತ್ತೇನೆ. ನಾನಂತೂ ಒಬ್ಬ ಮುಸಲ್ಮಾನ ಭಗವಾನ್ ಕೃಷ್ಣನನ್ನು ವಿವಾದಕ್ಕೆ ಕರೆದರೆ , " ಇಲ್ಲಿ ಹೊಡೆದಾಡಬೇಡ, ನ್ಯಾಯಾಲಯಕ್ಕೆ ಹೋಗು" ಎನ್ನುತ್ತೇನೆ.

ಸ್ವರಾಜ್ಯಕ್ಕಾಗಿ ನಮ್ಮಲ್ಲಿ ಒಂದು ಕಾವು ಬೇಕು. ನಮ್ಮ ಹೃದಯಗಳು ಅದಕ್ಕಾಗಿ ಪರಿತಪಿಸಬೇಕು. ಲೋಕಮಾನ್ಯರನ್ನು ನಾನು ನೆನೆದೆ. ನಮ್ಮ ಸ್ವರಾಜ್ಯದ ಶಿಲ್ಪಿ ಅವರು. ಅವರ ಹೆಂಡತಿ ಸಾಯುತ್ತಿರುವಾಗ ಅವರು ಸ್ವರಾಜ್ಯದ ಕೆಲಸದಲ್ಲಿ ತೊಡಗಿದ್ದರಂತೆ. ಇದು ಅವರ ಬಗ್ಗೆ ನಾನು ಕೇಳಿರುವ ಒಂದು ವಿಶೇಷ . ಇಂಥ ಜ್ವಾಲಾಮುಖಿಗಳು , ನಮ್ಮ ಹೃದಯದಲ್ಲಿ ಹುಟ್ಟುತ್ತಿರ ಬೇಕು . ಕಾಂಗ್ರೆಸ್ಸಿಗೆ ಬರುವಾಗ ನೀವು ಖಾದಿತೊಟ್ಟು ಬಂದದ್ದಕ್ಕೆ ಅದೇನೂ ದೊಡ್ಡ ಸಂಗತಿಯಲ್ಲ.

ಪರದೇಶೀ ಬಟ್ಟೆ ಬಿಡುವುದೂ ದೊಡ್ಡದಲ್ಲ. ಇವತ್ತು ನೀನು , ನಾನು ಪರದೇಶಿ ವಸ್ತ್ರ ದಹನವನ್ನು ಹೇಳುತ್ತಿಲ್ಲ. 1921ರಲ್ಲಿ ಪರದೇಶೀ ವಸ್ತ್ರ ದಹನ ಮಾಡಿಸಿದ ಮನುಷ್ಯ ನಾನೇ . 1921ರ ಕಾರ್ಯವನ್ನು ಮತ್ತೆ ಕೈಕೊಂಡೇನು. ಪರದೇಶೀ ವಸ್ತ್ರ ದಹನದ ನೆಪದಲ್ಲಿ ಜನಗಳ ಮೇಲೆ ಕಲ್ಲುಬೀರಲಿಕ್ಕೆ ಕಲ್ಲುಗುಡ್ಡೆ ಹಾಕಿದೆವು. ಸತ್ಯದ ಆಹ್ವಾನ, ಅಸತ್ಯಾಚರಣೆ 'ಇವೆರಡನ್ನೂ ನಾವು ಏಕಕಾಲಕ್ಕೆ ಮಾಡಲಾರೆವು ಎಂಬುದನ್ನು ನಾನು ಬಲ್ಲೆ . ಸತ್ಯವನ್ನು ಆಹ್ವಾನಿಸಿದರೆ, ಅಸತ್ಯವನ್ನು ಅಚರಿಸಲೇಬಾರದು. ಇಲ್ಲದೇ ಹೋದರೆ ನಮ್ಮ ದೇಹಗಳೇ ಸುಟ್ಟು ಹೋದಾವು. ಖಂಡಿತವಾಗಿಯೂ ನನ್ನ ಎದೆಯಂತೂ ಸುಡುತ್ತದೆ. ಯಾರಾದರೂ ಸುಳ್ಳು ಸುಳ್ಳೇ ದೇವರಾಣೆ ಇಟ್ಟರೆ, ಸುಳ್ಳು ಶಪಥ ಮಾಡಿದರೆ ನನಗೆ ಸೈರಣೆಯಾಗದು. ನನ್ನನ್ನು ಬೇಕಾದಷ್ಟು ಬೈಯಿರಿ, ಒದೆಯಿರಿ, ಮೆಟ್ಟಿನಿಂದ ಒದೆಯಿರಿ, ಮುಖದ ಮೇಲೆ ಉಗುಳಿರಿ; ನಾನು ಸಿಟ್ಟುಗೊಳ್ಳುವುದಿಲ್ಲ ಎಂದು ನಿಮಗೆ ಮಾತು ಕೊಡುತ್ತೇನೆ. ಒಂದು ಶಪಥಮಾಡಿ ಅದರಂತೆ ನಡೆಯದಿದ್ದರೆ, ಸಿಟ್ಟಿನಿಂದ ನನ್ನತ್ವ ಸುಟ್ಟು ಹೋಗುತ್ತದೆ. ಅಪವಿತ್ರಳಾದ ಒಬ್ಬ ಹೆಂಗಸು ನನ್ನ ಮುಂದೆ ತನ್ನ ಪಾವಿತ್ರ್ಯದ ಬಗ್ಗೆ ಜಂಬ ಕೊಚ್ಚಿಕೊಂಡರೆ ಸತ್ತು ಹೋಗಬೇಕು ಎಂದು ನನಗೆನಿಸುತ್ತದೆ. ಗಂಡಸು ನನ್ನ ಇದುರಿಗೆ ತನ್ನ ಪಾವಿತ್ರ್ಯದ ಜಂಬ ಕೊಚ್ಚಿಕೊಂಡರೂ ಅಷ್ಟೇ, ನಾನು ಅದನ್ನು ನೋಡ ಬಯಸುವುದಿಲ್ಲ.

ಈ ಅಧ್ಯಕ್ಷಗಿರಿಯ ಹೊಣೆಗಾರಿಕೆಯನ್ನು. ಹೊರಿಸುವದರ ಮೂಲಕ ನೀವು ನನಗೆ ತೋರಿಸಿದ ಪ್ರೇಮ, ಕರುಣೆ, ಹೀಗೇ ಸಾಗಬೇಕು ಎಂದರೆ ಇಲ್ಲದ ಆಡಂಬರವನ್ನು ಮರೆಯತಕ್ಕದ್ದಲ್ಲ ಎಂಬುದನ್ನು ಚೆನ್ನಾಗಿ ತಿಳಿದುಕೊಳ್ಳಬೇಕು. ಈ ಸ್ಥಾನದಲ್ಲಿ ನನ್ನನ್ನು ಇಟ್ಟರೂ ಸರಿ , ಬಿಟ್ಟರೂ ಸರಿ. ಸ್ವರಾಜ್ಯ ಪಕ್ಷದವರೂ, ಅಪರಿವರ್ತನವಾದಿಗಳೂ ಒಟ್ಟಿಗೆ ನಡೆದರೆ ಇನ್ನೂ ಉತ್ತಮ. ಡಾ। ಅನಿಬೆಸೆಂಟ್ ಹೇಳಿದ ಹಾಗೆ ಒಂದೇ ಒಂದು ಮರದ ಕೋಲು ಗಟ್ಟಿಯಾಗಿದ್ದರೂ ಸಹ ಮುರಿದು ಹೋಗುತ್ತದೆ. ಆದರೆ ಹಲವು ಕೋಲುಗಳನ್ನು ಸೇರಿಸಿ ಒಂದು ಹೊರೆಯಾಗಿ ಕಟ್ಟಿದರೆ ಆ ಹೊರೆ ಅಭೇದ್ಯವಾಗುತ್ತದೆ.

ಸ್ವರಾಜ್ಯ ಪಕ್ಷದವರು ಕೆಟ್ಟ ಮನುಷ್ಯರು ಎಂದು ನಾವು ತಿಳಿಯುವದು ಬೇಡ. ಶುದ್ಧ ಹೃದಯಕ್ಕೆ ಎಲ್ಲ ಹೃದಯಗಳೂ ಶುದ್ಧವೇ – ಆತ್ಮದ ಗುಣ ಏನು? ಆತ್ಮ ಅಮೃತಶಿಲೆ ಇದ್ದಂತೆ. ಶಂಕರಾಚಾರ್ಯರು ಹೇಳಿದ್ದಾರೆ. ಕಳಂಕ ಅದರ ಸ್ವಭಾವವಲ್ಲ . ಕಳಂಕ ಮಾಯೆ. ನಿಮ್ಮ ಹೃದಯ ಶಕ್ತಿವಂತವಾದರೆ. ಇತರರ ಕಳಂಕವನ್ನು , ಅವರ ಬಗ್ಗೆ ಕೆಡುಕನ್ನು ಯೋಚಿಸದೆಯೇ ತೊಡೆದು ಹಾಕಬಲ್ಲುದು. ವಿಶ್ವಾಸದ ಪ್ರತಿಫಲವು ದ್ರೋಹವಾದರೆ ನಂಬಿದವನಿಗೇನಾದರೂ ಕೆಡುಕು ಆಗುತ್ತದೆಯೇ? ದ್ರೋಹ ಮಾಡಿದವನಿಗೆ ಕೆಡುಕು. ಜವಾಹರಲಾಲರು ನನಗೆ ಮಗ ಇದ್ದ ಹಾಗೆ ಎಂದು ಹೇಳಿದರೆ ಅವರಿಂದ ಕೆಲಸ ಮಾಡಿಸಿಕೊಳ್ಳುವ ಮಟ್ಟಿಗೆ ಮಾತ್ರ ಹೀಗೆ ನಾನು ಹೇಳಿದ್ದಾದರೆ , ಅದು ಮೋಸ . ಜವಾಹರಲಾಲರನ್ನು ಗೌರವಿಸಲು ನಾನು ಯಾರು? ಜಗತ್ತು ಗೌರವಿಸುತ್ತದೆ. ಅವರ ಮೇಲೆ ಹೂಮಳೆಗರೆಯುತ್ತದೆ. ಇವತ್ತು ನಾನು ಅವರಿಗೆ ಮಾತ್ರ, ಅಥವಾ ಇವರಿಗೆ ಮಾತ್ರ ಹೇಳುವದಿಲ್ಲ. ಇಬ್ಬರಿಗೂ ಹೇಳುತ್ತೇನೆ. ಈ ಒಂದು ವರ್ಷ ಬಹಳ ಕಷ್ಟಪಟ್ಟು ಕೆಲಸ ಮಾಡಬೇಕು. ಆದರಿಂದ ನಮ್ಮ ಶಕ್ತಿ ಬೆಳೆಯಬೇಕು. ಸ್ವರಾಜ್ಯದ ಹಕ್ಕು ನಮ್ಮ ಅಳವಿಗೆ ಬಂದಿದೆಯೆಂದು ನಮಗೆ ಎನಿಸಬೇಕು.

ಇದುವರೆಗೆ ಗಾಂಧೀಜಿ ಹಿಂದಿಯಲ್ಲಿ ಮಾತಾಡಿ ಆಮೇಲೆ ಇಂಗ್ಲೀಷಿನಲ್ಲಿ ಮುಂದುವರೆಸುತ್ತಾ ಹೀಗೆ ಹೇಳಿದರು:

" ಇದುವರೆಗೆ ಹಿಂದಿಯಲ್ಲಿ ನನ್ನ ಮನಸ್ಸನ್ನು ತೋಡಿಕೊಂಡೆ. ಅದನ್ನೇ ಮತ್ತೆ ಹೇಳುವದು ನನಗೆ ಸಾಧ್ಯವಿಲ್ಲ. ಒಂದು ಮಾತನ್ನು ಮಾತ್ರ ಹೇಳುತ್ತೇನೆ. ಯಾವ ಅಧ್ಯಕ್ಷನೂ, ನೀವು, ಪ್ರತಿನಿಧಿಗಳು, ನನಗೆ ತೋರಿಸಿದ್ದಕ್ಕಿಂತ ಹೆಚ್ಚು ಪ್ರೀತಿಯನ್ನು ಹೆಚ್ಚು ಮರ್ಯಾದೆಯನ್ನು ಹೆಚ್ಚು ಗಮನವನ್ನು ಪಡೆದಿರಲಾರ. ಈ ಕಾಂಗ್ರೆಸ್ ಅಧಿವೇಶನದಲ್ಲಿ ಮತ್ತು ವಿಷಯ ನಿಯಾಮಕ ಸಮಿತಿಯಲ್ಲಿ ಅಧ್ಯಕ್ಷತೆ ವಹಿಸಿದ್ದು ನನಗೆ ಅತ್ಯಂತ ಹರ್ಷದಾಯಕವಾಗಿದೆ ಎಂದು ನಿಮಗೆ ಭರವಸೆ ನೀಡುತ್ತೇನೆ. ನಾನು ಹೇಳಿದ ಪ್ರತಿಯೊಂದು ಮಾತಿಗೂ ನೀವು ಸಮ್ಮತಿ ನೀಡಿದ್ದೀರಿ. ನಾನು ನಿಮ್ಮ ಮೇಲೆ ಬಹಳ



ಭಾರ ಹಾಕಿದ್ದೇನೆ ಎಂಬುದನ್ನು ಬಲ್ಲೆ. ನಿಮ್ಮನ್ನು ನಡೆಯಲೂ ಬಿಟ್ಟಿಲ್ಲ. ಓಡಿಸಿದ್ದೇನೆ, ಏನು ಮಾಡಲಿ? ನಿಮಗೂ ಆತುರ, ನನಗೂ ಆತುರ, ಸ್ವರಾಜ್ಯದ ಗುರಿಯತ್ತ ನಾವು ಮುನ್ನುಗ್ಗಬೇಕು. ಆಮೆ ನಡಿಗೆಯಂತೆ ಹೋದರೆ ಆದೀತೆ? ತುಂಬಾ ವೇಗವಾಗಿ ಸಾಗಬೇಕು. ನಾವು ಕಷ್ಟಪಟ್ಟು ದುಡಿದು ಮುಂದಕ್ಕೆ ಹೋಗಬೇಕು ಎಂದರೆ ನಿಮ್ಮದಾಗಲೀ ನನ್ನದಾಗಲೀ ಒಂದು ನಿಮಿಷವೂ ಕಾಲಹರಣ ಮಾಡಲಾಗದು. ಆದ್ದರಿಂದ ನನಗೆ ಸಾಮರ್ಥ್ಯವಿದ್ದಷ್ಟೂ ಗತಿ ಕೊಟ್ಟಿದ್ದೇನೆ. ನೀವು ಇಷ್ಟು ಗೌರವದಿಂದ ನನ್ನ ಕರೆಗೆ ಓಗೊಟ್ಟಿರುವದು ನನಗೆ ಹೆಚ್ಚಿನ ಅಚ್ಚರಿ, ತುಂಬ ತೃಪ್ತಿ. ಇದನ್ನು ಕೂಡ ಏನೋ ಶಿಷ್ಟಾಚಾರಕ್ಕೆ ನೀವು ಮಾಡಿಲ್ಲ. ಅದ್ಭುತ ಔದಾರ್ಯ ತೋರಿಸಿದ್ದೀರಿ. ಇದಕ್ಕಿಂತ ಹೆಚ್ಚು ಯಾರೂ ಅಪೇಕ್ಷಿಸಿರಲಾರರು, ಕೇಳಿರಲಾರರು, ಪಡೆದಿರಲಾರರು. ನಾನು ಕೇಳಬಹುದಾದ ಎಲ್ಲವನ್ನೂ ನೀವು ಕೊಟ್ಟಿದ್ದೀರಿ.

ಆದರೆ ನಾನು ಈಗ ಕೇಳುವುದು ಇದಕ್ಕಿಂತ ಹೆಚ್ಚಿನದು. ಉತ್ತಮ, ಉನ್ನತವಾದದ್ದು. ಅದೇಂದರೆ, ನೀವು ನನಗೆ ತೋರಿದ ಎಲ್ಲ ಪ್ರೀತಿಯನ್ನೂ, ಔದಾರ್ಯವನ್ನೂ ನನಗೂ ನಿಮಗೂ ಅತ್ಯಂತ ಪ್ರಿಯಕರವಾದ ಮತ್ತು ನನ್ನನ್ನು ನಿಮ್ಮನ್ನೂ ಏಕತ್ರ ಬಂಧಿಸುವ ಆ ಸ್ವರಾಜ್ಯಕ್ಕೆ ನೀಡಬೇಕು ಎಂದು ಕೇಳಿಕೊಳ್ಳುತ್ತೇನೆ. ಸ್ವರಾಜ್ಯ ಬೇಕಾಗಿದ್ದರೆ ನಾವು ಸ್ವರಾಜ್ಯದ ಆದರೆ ಸ್ವರಾಜ್ಯವಾದಿಗಳು, ಅಪರಿವರ್ತನವಾದಿಗಳು ಪರಸ್ಪರ ಅಸೂಯೆ ಪಟ್ಟರೆ ಇದನ್ನು ಮಾಡಲಾರಿರಿ. ದ್ವೇಷವನ್ನು ಸಂಪೂರ್ಣವಾಗಿ ನಾಶಮಾಡಿ, ಸಿಟ್ಟು, ಹೊಟ್ಟೆಉರಿಗಳನ್ನು ಪೂರ್ಣವಾಗಿ ಕೈಬಿಟ್ಟು ದುಷ್ಟ ಪ್ರಭಾವಗಳನ್ನೆಲ್ಲ ಈಗ ಇಲ್ಲಿಯೇ ಬಿಟ್ಟರೆ ಅದು ಸಾಧ್ಯವಾಗುತ್ತದೆ. ನಿಮ್ಮ ದ್ವೇಷವನ್ನು ಆಳವಾಗಿ ಹೂತುಬಿಡಿರಿ. ಅಸೂಯೆಯನ್ನು ಭೂಗರ್ಭದಲ್ಲಿ ಹೂತುಬಿಡಿರಿ. ಅವನ್ನೆಲ್ಲ ಸಿಕ್ಕಲ್ಲಿ ಸುಟ್ಟುಬಿಡಿರಿ. ಆದರೆ ನೀವು ತೀರ್ಮಾನಿಸಿರುವ ಈ ಪವಿತ್ರ ನಿರ್ಧಾರವನ್ನು ಜೊತೆಗೆ ತೆಗೆದುಕೊಂಡು ಹೋಗಿರಿ. ಬಂದದ್ದೆಲ್ಲ ಬರಲಿ. ಇವತ್ತು ಸ್ವರಾಜ್ಯವಾದಿಗಳನ್ನೂ ಅಪರಿವರ್ತನವಾದಿಗಳನ್ನೂ ಈ ಗೊತ್ತುವಳಿಗಳ ಸೂತ್ರವು ಬಂಧಿಸಿದ್ದು, ಈ ಬಂಧನ ಎಂದಿಗೂ ಕತ್ತರಿಸದಿರಲಿ. ನನ್ನ ಕೆಲಸ ಮುಗಿಯಿತು.

ವೇದಿಕೆಯಿಂದ ಇಳಿಯುವಾಗ ಸ್ವಾಗತ ಸಮಿತಿಗೆ ಧನ್ಯವಾದ ಕೊಡುವ ನೆನಪಾಗಿ, ಅಧ್ಯಕ್ಷರು ಮತ್ತೆ ಗದ್ದಿಗೆಗೆ ಬಂದು ಹೀಗೆ ಹೇಳಿದರು: ಡಾ . ಹರ್ಡೀಕರರು ತರಬೇತು ಮಾಡಿದ ಈ ಸ್ವಯಂ ಸೇವಕರಿಗೆ ಧನ್ಯವಾದಗಳನ್ನು ಹೇಳದಿದ್ದರೆ , ಸ್ವಾಗತ ಸಮಿತಿಗೆ ಧನ್ಯವಾದ ಅರ್ಪಿಸದೇ ಇದ್ದರೆ, ನನ್ನನ್ನು ನಾನು ಕ್ಷಮಿಸಿ ಕೊಳ್ಳಲು ಆಗುತ್ತಿದ್ದಿಲ್ಲ. ಸ್ವರಾಜ್ಯದ ಹುಚ್ಚಿನಿಂದಾಗಿ ಸ್ವಯಂ ಸೇವಕರನ್ನೂ, ಸ್ವಾಗತ ಸಮಿತಿಯನ್ನೂ ಮರೆತೇಬಿಟ್ಟೆ. ಈ ಧನ್ಯವಾದಗಳಿಗಾಗಿ ಅವರು ಸೇವೆಮಾಡಿಲ್ಲ ಎಂಬುದನ್ನು ಬಲ್ಲೆ. ಅವರು ಮಾಡಿದ ಉನ್ನತ ಸೇವೆಯೇ ಅದಕ್ಕೆ ಪ್ರತಿಫಲ. ಆದರೆ ಅದು ನನ್ನ ಹೊಣೆ ನಿಮ್ಮನ್ನೂ ಎಲ್ಲರನ್ನೂ ವಂದಿಸದೇ ಇದ್ದರೆ ನನ್ನದು ಕರ್ತವ್ಯ ಲೋಪವಾಗುತ್ತಿತ್ತು. ಸ್ವಯಂ ಸೇವಕರನ್ನೂ ಸ್ವಾಗತ ಸಮಿತಿಯ ಸದಸ್ಯರನ್ನೂ ದೇವರು ಆಶೀರ್ವದಿಸಲಿ.

ಅಧಿವೇಶನ ಎರಡು ದಿನ ನಡೆಯಿತು.

ಬೆಳಗಾವಿಯಲ್ಲಿ ಕಾಂಗ್ರೆಸ್ಸಿನಲ್ಲಿ ಮುಖ್ಯವಾಗಿ ಆದದ್ದು ಅಪರಿವರ್ತನವಾದಿಗಳಿಗೂ, ಪರಿವರ್ತನವಾದಿಗಳಿಗೂ ನಡೆದ ಒಂದು ಒಪ್ಪಂದ. ಗಾಂಧೀಜಿಗೂ ಸ್ವರಾಜ್ಯ ಪಕ್ಷದ ಮುಖಂಡರಿಗೂ, ಆಗಿದ್ದ ಒಪ್ಪಂದವನ್ನು ಕಾಂಗ್ರೆಸ್ ಒಪ್ಪಿಕೊಂಡಿತು. ಗಾಂಧೀಜಿಯ ರಚನಾತ್ಮಕ ಕಾರ್ಯಕ್ಕೆ ತಮ್ಮ ಇಡೀ ಸಮಯವನ್ನು ಕೊಡಲು ಅಪರಿವರ್ತನವಾದಿಗಳೆಲ್ಲರೂ ಒಪ್ಪಿಕೊಂಡರು. ಕೊನೆಯ ದಿನ ಗಾಂಧೀಜಿ ತಮ್ಮ ಭಾಷಣದಿಂದ ಅಧಿವೇಶನವನ್ನು ಮುಕ್ತಾಯಗೊಳಿಸಿದರು .

ಅಸ್ಪೃಶ್ಯತಾ ನಿವಾರಣೆಯ ಸಮ್ಮೇಳನದಲ್ಲಿ ಗಾಂಧೀಜಿಯ ಭಾಷಣ.

ಗೆಳೆಯರೇ,

ಅಸ್ಪೃಶ್ಯತಾ ನಿವಾರಣೆಯ ವಿಷಯದಲ್ಲಿ ನನ್ನ ಅಭಿಪ್ರಾಯವನ್ನು ತಿಳಿಸಲು ಕೇಳುವ ಅಗತ್ಯವಿಲ್ಲ . ಎಷ್ಟೋ ಸಲ ಎಷ್ಟೋ ಸಾರ್ವಜನಿಕ ವೇದಿಕೆಗಳಿಂದ ನಾನು ಹೇಳಿದ್ದೇನೆ, – ಇದೇ ಜನ್ಮದಲ್ಲಿ ನನಗೆ ಮೋಕ್ಷ ಸಿಗದಿದ್ದರೆ, ಮುಂದಿನದರಲ್ಲಿ ನಾನು ಭಂಗಿಯಾಗಿಯೇ ಹುಟ್ಟಬೇಕು ಎಂಬುದು ನನ್ನ ಪ್ರಾರ್ಥನೆ ಎಂದು. ಜನ್ಮತಃ ಕರ್ಮತಃ ವರ್ಣಾಶ್ರಮದಲ್ಲಿ

ನನಗೆ ನಂಬಿಕೆ ಇದೆ. ಆದರೆ ಭಂಗಿ ತುಚ್ಛ , ಕೀಳು ಎಂದು ನಾನು ತಿಳಿಯುವುದಿಲ್ಲ . ಇಷ್ಟೇ ಅಲ್ಲ, ಎಷ್ಟೋ ಜನ ಭಂಗಿಗಳು ಗೌರವಪಾತ್ರರೆಂಬುದನ್ನು ನಾನು ಬಲ್ಲೆ. ಎಷ್ಟೋ ಜನ ಗೌರವಾರ್ಹರಲ್ಲದ ಬ್ರಾಹ್ಮಣರೂ ಇದ್ದಾರೆ. ಈ ಅಭಿಪ್ರಾಯವಿರುವ ನನಗೆ ಮುಂದಿನ ಜನ್ಮ ಎಂಬುದೊಂದಿದ್ದರೆ ಅಂತ್ಯಜರ ನಡುವೆ ಅಂತ್ಯಜನಾಗಿಯೇ ಹುಟ್ಟಬೇಕೆಂದು ನಾನು ಬಯಸುತ್ತೇನೆ.

ಆದರೆ ಸವರ್ಣರು ಹೇಗೆ ಈ ಅವರ್ಣರನ್ನು ತಿರಸ್ಕರಿಸಬಾರದು ಎನ್ನುತ್ತೇನೋ ಹಾಗೆಯೇ ಅವರ್ಣರು ಸವರ್ಣರ ವಿಷಯದಲ್ಲಿ ದ್ವೇಷ, ವಿರಸ ತೋರಬಾರದು ಎನ್ನುತ್ತೇನೆ. ಪಾಶ್ಚಾತ್ಯರಂತೆ ಅವರು ಹಿಂಸಾಮೂಲಕ ತಮ್ಮ ಹಕ್ಕುಗಳನ್ನು ಕಸಿಯಬೇಕು ಎಂದು ನಾನು ಹೇಳಲಾರೆ. ಈಗ ಜಾಗತಿಕ ಅಭಿಪ್ರಾಯದ ಒಲವು ಈ ಬಗೆಯ ಹಿಂಸೆಗೆ ವಿರುದ್ಧವಾಗಿದೆ. ಜಗತ್ತಿನಲ್ಲಿ

ಯಾರೂ ಯಾವುದನ್ನೂ ಹಿಂಸೆಯಿಂದ ಸಾಧಿಸಿಕೊಳ್ಳಲಾರರು ಎಂಬುದನ್ನು ನಾನು ಸ್ಪಷ್ಟ ಕಾಣುತ್ತೇನೆ. ಆದ್ದರಿಂದ ನನ್ನ ಅಂತ್ಯಜ ಸೋದರರಿಗೂ, ಸರಕಾರಕ್ಕೂ ಹೇಳುತ್ತೇನೆ – ತಮ್ಮ ಉದ್ದೇಶ ಸಾಧನೆಗಾಗಿ ಹಿಂಸೆಯನ್ನು ಅವಲಂಬಿಸಿದರೆ ಖಂಡಿತವಾಗಿಯೂ ಅವರು ವಿಫಲರಾಗುತ್ತಾರೆ. ಹಿಂದೂ ಧರ್ಮವನ್ನು ಮೇಲಕ್ಕೆತ್ತಲು ಬಯಸುತ್ತೇನೆ . ಅಸ್ಪೃಶ್ಯರು ಹಿಂದೂ ಸಮಾಜದ ಅವಿಭಾಜ್ಯ ಅಂಗವೆಂದು ನಾನು ಪರಿಗಣಿಸುತ್ತೇನೆ.

ಸಮಾವೇಶದಲ್ಲಿ ಒಬ್ಬನೇ ಒಬ್ಬ ಭಂಗಿಯನ್ನು ಹೊರತಳ್ಳಿದರೂ ನನಗೆ ನೋವಾಗುತ್ತದೆ. ಹೀಗೆ ಮಾಡದೇ ಇದ್ದರೆ ಎಲ್ಲ ವರ್ಗ ಭೇದಗಳೂ ಅಳಿದು ಹೋಗುತ್ತವೆ ಎಂದು ನಂಬಬೇಡಿರಿ. ಗೀತೆಯಲ್ಲಿ ಭಗವಾನ್ ಕೃಷ್ಣನು ಬೋಧಿಸಿದ ಸರ್ವಸಮಾನತೆಯ ಸಿದ್ಧಾಂತದಲ್ಲಿ ನನಗೆ ನಂಬುಗೆ. ನಾಲ್ಕು ವರ್ಣಗಳನ್ನೂ ಸಮತೆಯಿಂದ ಕಾಣಬೇಕು ಎಂದು ಗೀತೆ ಬೋಧಿಸುತ್ತದೆ. ಬ್ರಾಹ್ಮಣರಿಗೂ, ಭಂಗಿಗೂ ಒಂದೇ ಬಗೆಯ ಧರ್ಮವನ್ನು ಅದು ಉಪದೇಶಿಸುವದಿಲ್ಲ. ಆದರೆ ಬ್ರಾಹ್ಮಣನಿಗೆ ತೋರಿದಷ್ಟೇ ಗೌರವಗಳನ್ನು ಭಂಗಿಗೂ ತೋರಿಸಬೇಕು ಎಂದು ಒತ್ತಾಯಮಾಡುತ್ತದೆ. ಅದ್ದರಿಂದ ತಮ್ಮನ್ನು ಕೀಳಾಗಿ ಕಾಣುತ್ತಾರೆಂದು ಅಸ್ಪೃಶ್ಯರಿಗೆ ಅನಿಸದಂತೆ ನೋಡಿಕೊಳ್ಳುವದು ನಮ್ಮ ಕರ್ತವ್ಯ . ನಮ್ಮ ಎಂಜಲೆಲೆಯಲ್ಲಿ ಉಳಿದದ್ದನ್ನು ಅವರ ಹೊಟ್ಟೆಯಪಾಡಿಗಾಗಿ ಕೊಡುವುದೂ ಬೇಡ. ನಾವು ಪೂಜಿಸುವ ದೇವರನ್ನೇ ಪೂಜಿಸಿ, ತನ್ನ ದೇಹವನ್ನೂ ಆತ್ಮವನ್ನೂ ಪರಿಶುದ್ಧವಾಗಿ ಸ್ವಚ್ಛವಾಗಿ ಇಟ್ಟುಕೊಳ್ಳುವವನು ಬ್ರಾಹ್ಮಣನೇ ಇರಲಿ, ಭಂಗಿಯೇ ಇರಲಿ , ನಾನು ಹೇಗೆ ಭೇದಭಾವದಿಂದ ನಡೆಸಿಕೊಳ್ಳಲಿ ? ಭಂಗಿಗೆ ಭೋಜನಶೇಷದ ಅಶುದ್ಧ ಆಹಾರವನ್ನು ಕೊಟ್ಟರೆ, ಅಥವಾ ಅವನಿಗೆ ಅಗತ್ಯವಿದ್ದಾಗ ವೈಯಕ್ತಿಕ ಸಹಾಯವನ್ನು ನೀಡದೇ ಹೋದರೆ ನಾನು ಪಾಪ ಮಾಡಿದೆನೆಂದೇ ನನ್ನ ಭಾವನೆ.

ನನ್ನ ನಿಲುವನ್ನು ನಾನು ಇನ್ನೂ ಹೆಚ್ಚು ಸ್ಪಷ್ಟ ಪಡಿಸುತ್ತೇನೆ . ಇವತ್ತು ರೂಢಿಯಲ್ಲಿರುವ ಅಸ್ಪಶ್ಯತೆಯ ವ್ಯವಸ್ಥೆಗೆ ಹಿಂದೂ ಧರ್ಮ ಆಧಾರವಲ್ಲ ಎಂದು ನನ್ನ ಅಭಿಪ್ರಾಯವಾದರೂ ಕೆಲವು ಪರಿಸ್ಥಿತಿಯಲ್ಲಿ ಒಂದು ಪರಿಮಿತ ಅರ್ಥದಲ್ಲಿ ಅಸ್ಪೃಶ್ಯತೆಯನ್ನು ಹಿಂದೂ ಧರ್ಮ ಒಪ್ಪುತ್ತದೆ. . ಉದಾಹರಣೆಗೆ, ಹೊಲಸು ಪದಾರ್ಥಗಳನ್ನು ಮುಟ್ಟಿದ ಸಲ ಸಲಕ್ಕು ನಮ್ಮ ತಾಯಿ ಅಸ್ಪೃಶ್ಯಳಾಗುತ್ತಾಳೆ . ಅದು ತತ್ಕಾಲ ಮಾತ್ರ. ಆಕೆ ಸ್ನಾನಮಾಡಿದ ಮೇಲೆಯೇ ಶುಚಿಯಾಗುತ್ತಾಳೆ. ನಾನು ವೈಷ್ಣವನಾದ್ದರಿಂದಲೇ ಜನ್ಮತಃ ಯಾರೂ ಅಸ್ಪಶ್ಯರು ಎಂದು ನಾನು ನಂಬುವದಿಲ್ಲ. ಧರ್ಮದಲ್ಲಿ ಹೇಳುವ ಅಸ್ಪಶ್ಯತೆ ಸ್ವಾಭಾವಿಕವಾಗಿ ಬಹಳ ತಾತ್ಕಾಲಿಕ.

ಆದ್ದರಿಂದ ಅದನ್ನು ಸುಲಭವಾಗಿ ನಿವಾರಿಸಬಹುದು. ಅದು ಆ ಕೆಲಸಕ್ಕೆ ಸಂಬಂಧಿಸಿದ್ದೇ ವಿನಃ ಕೆಲಸ





ಮಾಡುವವನಿಗಲ್ಲ. ಅಷ್ಟೇ ಅಲ್ಲ, ನಾವು ಎಳೆಯ ಮಕ್ಕಳಾಗಿದ್ದಾಗ ನಮ್ಮ ತಾಯಿ ನಮ್ಮನ್ನು ತೊಳೆದು ಮಾಡಿದ ಸ್ವಚ್ಛತೆಯ ಸೇವೆಗಾಗಿ ಅಕೆಯನ್ನು ಹೇಗೆ ಪೂಜಿಸುತ್ತೇವೋ ಮತ್ತು ಆಕೆ ಇನ್ನೂ ಹೆಚ್ಚು ಹೆಚ್ಚು ಸೇವೆ ಮಾಡಿದರೆ ಹೇಗೆ ಪೂಜ್ಯಭಾವ ಇನ್ನೂ ಹೆಚ್ಚುತ್ತದೆಯೋ ಹಾಗೆ ಭಂಗಿಗಳೂ ಕೂಡ ಸಮಾಜಕ್ಕಾಗಿ ಅವರು ಮಾಡುವ ಸ್ವಚ್ಛತೆಯ ಕೆಲಸದಿಂದ ಗೌರವ ಪಾತ್ರರಾಗಬೇಕು

ಈಗ ಇನ್ನೊಂದು ವಿಷಯ ; ಸಹಭೋಜನ . ಅಂತರಜಾತಿಯ ಅಸ್ಪೃಶ್ಯತಾ ವಿವಾಹ ನಿವಾರಣೆಗೆ ಅದು ಮುಖ್ಯ ಎಂದು ನಾನು ತಿಳಿದಿಲ್ಲ. ವರ್ಣಾಶ್ರಮ ಧರ್ಮದಲ್ಲಿ ನನಗೆ ನಂಬಿಕೆ ಇದೆ. ಆದರೆ ಭಂಗಿಗಳೊಂದಿಗೆ ನಾನು ಊಟಮಾಡುತ್ತೇನೆ. ನಾನು ಸನ್ಯಾಸಿ ಹೌದೋ ಅಲ್ಲವೋ ನನಗೆ ಗೊತ್ತಿಲ್ಲ. ಏಕೆಂದರೆ ಈ ಕಲಿಯುಗದಲ್ಲಿ ಸನ್ಯಾಸದ ನಿಯಮಗಳನ್ನು ಯಾರಿಗೆ ಆಗಲಿ ಪಾಲಿಸಲು ಸಾಧ್ಯವೋ ಅಲ್ಲವೋ ನನಗೆ ಸಂದೇಹ . ಆದರೆ ಸನ್ಯಾಸದ ಕಡೆ ನಾನು ಉದ್ದೇಶಪೂರ್ವಕ ಹೋಗುತ್ತಿದ್ದೇನೆ. ಆದ್ದರಿಂದ ಈ ಆಚಾರಗಳು ನನಗೆ ಅಗತ್ಯ ಇಲ್ಲ . ಇಷ್ಟೇ ಅಲ್ಲ, ಅವುಗಳ ಆಚರಣೆಯಿಂದ ನನಗೆ ಕೆಡುಕೂ ಆಗಬಹುದು.

ಅಂತರ್ಜಾತೀಯ ವಿವಾಹದ ಪ್ರಶ್ನೆ ನನ್ನಂಥವರ ವಿಷಯದಲ್ಲಿ ಉದ್ಭವಿಸುವದೂ ಇಲ್ಲ. ನನ್ನ ಯೋಜನೆಯಲ್ಲಿ ಅಂತರ್ಜಾತೀಯ ವಿವಾಹ ಸಧ್ಯಕ್ಕಿಲ್ಲ. ನಮ್ಮ ವೈಷ್ಣವ ಪಂಗಡದಲ್ಲಿ ವೈಷ್ಣವರೆಲ್ಲ ಸಹಭೋಜನ ಮಾಡಬೇಕೆನ್ನುವ ಸಂಪ್ರದಾಯವಿಲ್ಲ . ವೈಷ್ಣವ ಕುಟುಂಬದಲ್ಲಿ ಒಬ್ಬರು ಊಟಮಾಡಿದ ಪಾತ್ರೆಯನ್ನು ಇನ್ನೊಬ್ಬರು ಬಳಸುವದಿಲ್ಲ; ಅಲ್ಲದೆ ಇನ್ನೊಬ್ಬರ ಅಡಿಗೆ ಮನೆಯಿಂದ ತಂದ ಬೆಂಕಿಯನ್ನು ಸಹ ಅಡಿಗೆ ಮಾಡಲು ಉಪಯೋಗಿಸುವ ಪದ್ಧತಿ ಇಲ್ಲ. ಇದನ್ನು ಕುರುಡು ಸಂಪ್ರದಾಯ ಎಂದೀರಿ. ನಾನು ಹಾಗೆ ಅನ್ನುವದಿಲ್ಲ.

ಅದರಿಂದ ಹಿಂದೂ ಧರ್ಮಕ್ಕೆ ಹಾನಿ ಇಲ್ಲ. ನನ್ನ ಆಶ್ರಮದಲ್ಲಿ ದೂಧಾಭಾಯಿ ಒಬ್ಬ ಅಸ್ಪಶ್ಯ ಆಶ್ರಮ ನಿವಾಸಿ, ಎಲ್ಲರ ಜತೆಯಲ್ಲೂ ಯಾವ ತಾರತಮ್ಯ ಇಲ್ಲದೇ ಊಟ ಮಾಡುತ್ತಾನೆ. ಆಶ್ರಮದ ಹೊರಗಡೆ ಇದೇ ರೀತಿ ಮಾಡಿರಿ ಎಂದು ಯಾರಿಗೂ ನಾನು ಹೇಳುವದಿಲ್ಲ.

ಪಂಡಿತ ಮಾಲವಿಯರನ್ನು ಕಂಡರೆ ನನಗೆ ಎಷ್ಟು ಗೌರವ ಎಂಬುದನ್ನು ನೀವು ಬಲ್ಲಿರಿ. ಅವರ ಕಾಲನ್ನು ತೊಳೆಯುತ್ತೇನೆ. ಆದರೆ ನಾನು ಮುಟ್ಟಿದ ಅನ್ನವನ್ನು ಅವರು ತಿನ್ನುವದಿಲ್ಲ.

ಇದನ್ನು ತಿರಸ್ಕಾರ ಎಂದು, ಹೀನಾಯ ಎಂದು ಮುನಿದುಕೊಳ್ಳಲೇ? ಖಂಡಿತ ಇಲ್ಲ. ಅವರ ಮನಸಿನಲ್ಲಿ ಆ ಬಗೆಯ ತಿರಸ್ಕಾರವೂ ಇಲ್ಲ ಎಂದು ನಾನು ಬಲ್ಲೆ. ನನ್ನ ಮತ, ಮರ್ಯಾದಾ ಧರ್ಮವನ್ನು ವಿಧಿಸುತ್ತದೆ. ಹಿಂದಿನ ಋಷಿಗಳು ಧ್ಯಾನದಲ್ಲಿ ಕುಳಿತು ವಿಸ್ತಾರವಾಗಿ ಪರಿಶೋಧನ ಮಾಡಿದ್ದಾರೆ. ಆ ಪರಿಶೋಧನಗಳ ಫಲವಾಗಿ ಕೆಲವು ಮಹಾನ್ ಸತ್ಯಗಳನ್ನು ಕಂಡುಹಿಡಿದಿದ್ದಾರೆ. ಬಹುಶಃ ಅವಕ್ಕೆ ಸಾಟಿಯಾದವು ಬೇರೆ ಯಾವ ಧರ್ಮದಲ್ಲಿಯೂ ಇಲ್ಲ. ಅವುಗಳಲ್ಲಿ ಒಂದು ಸತ್ಯ, ಮನುಷ್ಯನ ಅಧ್ಯಾತ್ಮಿಕ ಯೋಗಕ್ಷೇಮಕ್ಕೆ ಕೆಲವು ಬಗೆಯ ಆಹಾರ ಬಾಧಕ ಎಂಬುದು. ಆದರಿಂದ ಅವುಗಳ ಸೇವನೆಯನ್ನು ನಿಷೇಧಿಸಿದರು.

ಯಾರಾದರೂ ಒಬ್ಬ ಪರದೇಶಗಳಿಗೆ ಪ್ರವಾಸ ಹೋಗಿ, ಬೇರೆ ಸಂಪ್ರದಾಯ ಬೇರೆ ಆಹಾರ ಪದ್ಧತಿ ಇರುವ ವಿಚಿತ್ರ ಜನರ ನಡುವೆ ಇರಬೇಕಾಯಿತು ಎನ್ನಿ. ನಾವು ಯಾರ ನಡುವೆ ಬದುಕುತ್ತೇವೋ ಅಂಥ ಜನರ ಸಾಮಾಜಿಕ ಸಂಪ್ರದಾಯಗಳ ಪ್ರಧಾನ ಒತ್ತಡವನ್ನು ಗಮನಿಸಿ ಅಂಥ ಪರಿಸ್ಥಿತಿಯಲ್ಲಿ ನೆರವು ನೀಡುವಂತೆ ಒಂದು ಮರ್ಯಾದಾ ಧರ್ಮವನ್ನು ನಮ್ಮವರು ಕಲ್ಪಿಸಿದರು. ಈ ಮರ್ಯಾದಾ ಧರ್ಮದಲ್ಲಿ ನಾನು ವಿಶ್ವಾಸ ಇಟ್ಟಾಗ್ಯೂ ಅದು ಹಿಂದೂ ಧರ್ಮದ ಅನಿವಾರ್ಯ ಅಂಗ ಎಂದು ನಾನು ಮನ್ನಿಸುವದಿಲ್ಲ. ಈ ಪರಿಮಿತಿಗಳನ್ನು ನಿಸಂಕೋಚವಾಗಿ ಪೂರ್ಣ ತೆಗೆದುಹಾಕುವ ಸಂದರ್ಭವನ್ನೂ ನಾನು ಊಹಿಸಿಕೊಳ್ಳಬಲ್ಲೆ.

ಆದರೆ ಅಸ್ಪೃಶ್ಯತಾ ನಿವಾರಣಾ ಚಳವಳಿಯಲ್ಲಿ ಅಂತರ್ಜಾತೀಯ ಭೋಜನ, ಅಂತರ್ಜಾತೀಯ ವಿಚಾರಗಳ ನಿರ್ಬಂಧಗಳನ್ನು ತೊಡೆದುಹಾಕುವ ಯೋಚನೆ ಇಲ್ಲ. ಈ ನಿಷೇಧಗಳನ್ನು ಪೂರ್ಣ ತೆಗೆದುಹಾಕಿಬಿಡಿ ಎಂದು ನಾನು ಸಾರ್ವಜನಿಕರಿಗೆ ಹೇಳಲಾರೆ. ಇದಕ್ಕಾಗಿ ನನ್ನನ್ನು ವಂಚಕ, ಅಸಂಗತ ವ್ಯಕ್ತಿ ಎಂದರೂ ಚಿಂತೆ ಇಲ್ಲ. ಉದಾಹರಣೆಗೆ, ನನ್ನ ಮಗನನ್ನು ಮುಸಲ್ಮಾನ ಮನೆಗಳಲ್ಲಿ ಧಾರಾಳವಾಗಿ ಊಟ ಮಾಡಗೊಡುತ್ತೇನೆ. ಏಕೆಂದರೆ ಏನು ತಿನ್ನಬೇಕು, ಏನು

ತಿನ್ನಬಾರದು ಇದನ್ನು ಅವನು ಸಾಕಷ್ಟು ಮಟ್ಟಿಗೆ ವಿವೇಚಿಸಬಲ್ಲ. ನನ್ನ ಮಟ್ಟಿಗೆ ನಾನು ಮುಸಲ್ಮಾನರ ಮನೆಗಳಲ್ಲಿ ಊಟಮಾಡಲು ಸಂಕೋಚ ಪಡುವದಿಲ್ಲ.

ಆದರೆ ನನ್ನ ಆಹಾರದ ಬಗ್ಗೆ ಕೆಲವು ಕಟ್ಟು ನಿಟ್ಟಾದ ನಿಯಮಗಳನ್ನು ಇಟ್ಟುಕೊಂಡಿದ್ದೇನೆ.

ಅಲಿಘಡದಲ್ಲಿ ನಡೆದ ಒಂದು ಸಂಗತಿ ಹೇಳುತ್ತೇನೆ. ಸ್ವಾಮಿ ಸತ್ಯದೇವರೂ, ನಾನೂ, ಖ್ವಾಜಾ ಸಾಹೇಬರ ಅತಿಥಿಗಳಾಗಿದ್ದೆವು. ನನ್ನ ಅಭಿಪ್ರಾಯಗಳಂತೆ ಸ್ವಾಮಿ ಸತ್ಯದೇವರ ಅಭಿಪ್ರಾಯಗಳು ಇರಲಿಲ್ಲ. ಈ ಬಗ್ಗೆ ಇಬ್ಬರಿಗೂ ವಾದವಾಯಿತು. ನನ್ನ ಪ್ರಕಾರ ಮುಸಲ್ಮಾನ ಕೊಟ್ಟ ಆಹಾರವನ್ನು ನಿರಾಕರಿಸುವುದು ತಪ್ಪು . ಅದೇ ನೀವು ನಿಮ್ಮ ನಿಯಾಮಕ ಧರ್ಮವನ್ನು ಮೀರಿ ನಡೆಯುವದು ನಿಮ್ಮ ಮಟ್ಟಿಗೆ ತಪ್ಪು. ಆದ್ದರಿಂದ ಸ್ವಾಮಿ ಸತ್ಯದೇವರಿಗೆ ಪ್ರತ್ಯೇಕ ಅಡಿಗೆಯ ವ್ಯವಸ್ಥೆ ಆಯಿತು. ಬಾರೀ ಸಾಹೇಬರ ಅತಿಥಿಯಾಗಿದ್ದಾಗಲೂ ಅಷ್ಟೇ. ಒಬ್ಬ ಬ್ರಾಹ್ಮಣ ಪರಿಚಾರಕನನ್ನು ಕರೆಸಿ, ಎಲ್ಲ ಪದಾರ್ಥಗಳನ್ನು ಅಂಗಡಿಯಿಂದ ಹೊಸದಾಗಿ ತರಬೇಕೆಂದು ಕಟ್ಟುನಿಟ್ಟಾಗಿ ಅಪ್ಪಣೆಯಾಯಿತು. ಇಷ್ಟೇಕೆ ಕಷ್ಟ ತೆಗೆದುಕೊಂಡಿರಿ ಎಂದು ಕೇಳಿದಾಗ, ತಾನು ಏನೋ ಗುಟ್ಟಾಗಿ ನನ್ನನ್ನೂ, ನನ್ನ ಜತೆಗಾರರನ್ನೂ ಪರಿವರ್ತನೆ ಮಾಡಲು ಉಪಾಯ ಮಾಡಿದ್ದಾನೆ ಎಂದು ಸಾರ್ವಜನಿಕರು ಸ್ವಲ್ಪವೂ ಸಂದೇಹ ಪಡದಿರಲಿ ಎಂದು ಇಷ್ಟೆಲ್ಲ ಮಾಡಿದೆ ಎಂಬುದಾಗಿ ಬಾರೀ ಸಾಹೇಬರು ಹೇಳಿದರು.

ಈ ಒಂದೇ ಸಂಗತಿ ನನಗೆ ಬಾರೀ ಸಾಹೇಬರಲ್ಲಿ ಇದ್ದ ಗೌರವ ಹೆಚ್ಚಿಸಿದ್ದು. ಕೆಲವು ವೇಳೆ ಅವರು ತಪ್ಪು ಮಾಡುತ್ತಾರೆ. ಆದರೆ ಅವರ ಸ್ವಭಾವ ಮಗುವಿನ ಹಾಗೆ ಸರಳ, ಮತ್ತು ಮುಗ್ಧ ಕೆಲವು ವೇಳೆ ಜನರು ಅವರ ವಿಷಯವಾಗಿ ಎಷ್ಟೋ ಕಟುವಾಗಿ ದೂರುತ್ತಾರೆ. ಆದರೆ ನನಗೆ ಅವರ ಬಗೆಗಿದ್ದ ಮೊದಲಿನ ಅಭಿಪ್ರಾಯವೇ ಸ್ಥಿರವಾಗಿದೆ.

ಈ ವಿಷಯವಾಗಿ ಬಹಳ ದೀರ್ಘವಾಗಿ ಹೇಳಿದ್ದೇನೆ. ನಿಮ್ಮ ಸಂಗಡ ( ಅಸ್ಪೃಶ್ಯರು ) ಪೂರಾ ಸ್ಪಷ್ಟವಾಗಿ ಇರಬಯಸುತ್ತೇನೆ. ನಿಮ್ಮ ಸಂಗಡ ವ್ಯವಹಾರದಲ್ಲಿ ಯಾವುದೇ ಬಗೆಯ ಧೂರ್ತವರ್ತನೆಯನ್ನು ಅನುಸರಿಸ ಬಯಸುವದಿಲ್ಲ. ಅದೇಕೆ, ಯಾರೊಂದಿಗೂ ಅಂಥ ವರ್ತನೆ ಇಲ್ಲ. ನಿಮಗೆ ನಾನು ಯಾವ ಸುಳ್ಳು ಕಲ್ಪನೆಯನ್ನೂ ಕೊಡುವದಿಲ್ಲ. ಪ್ರಲೋಭನ ತೋರಿಸಿ ನಿಮ್ಮ ಬೆಂಬಲ ಪಡೆಯುವದಿಲ್ಲ. ಸ್ವರಾಜ್ಯ ಪ್ರಾಪ್ತಿಗೆ ನಿವಾರಣೆ ಅತ್ಯಗತ್ಯ .ನನಗೆ ಸ್ವರಾಜ್ಯ ಬೇಕು. ಆದ್ದರಿಂದ ಅಸ್ಪೃಶ್ಯತೆಯನ್ನು ನಿವಾರಿಸಬಯಸುತ್ತೇನೆ. ನನ್ನ ಯಾವುದೇ

ರಾಜಕೀಯ ಲಾಭಕ್ಕಾಗಿ ನಿಮ್ಮನ್ನು ನಾನು ದುರುಪಯೋಗ ಪಡಿಸಿಕೊಳ್ಳುವುದಿಲ್ಲ. ನನ್ನ ಅಸ್ಪೃಶ್ಯತಾ ಸಮಸ್ಯೆ ಸ್ವರಾಜ್ಯಕ್ಕಿಂತ ಹಿರಿದಾದುದು. ಅಸ್ಪೃಶ್ಯತೆ ಹೋಗಬೇಕೆಂದು ನನಗೆ ಆತುರ. ಏಕೆಂದರೆ ನನ್ನ ಪಾಲಿಗೆ ಅದೊಂದು ಪ್ರಾಯಶ್ಚಿತ್ತ, ತಪಸ್ಸು ಅಸ್ಪೃಶ್ಯರ ಶುದ್ಧಿಯನ್ನು ನಾನು ಮಾಡುವದಿಲ್ಲ.

ಅದು ಮೂರ್ಖತನವಾದೀತು . ಆದರೆ, ನನ್ನ ಶುದ್ಧಿ ಮತ್ತು ಹಿಂದೂ ಧರ್ಮದ ಶುದ್ಧಿ ಆಗಬೇಕಾಗಿದೆ. ಈ ಕೆಡುಕಿಗೆ ಆಸ್ಪದ ಕೊಟ್ಟು, ಹಿಂದೂ ಧರ್ಮ ಬಹಳ ದೊಡ್ಡ ಪಾಪ ಮಾಡಿದೆ. ಪರರಿಗಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳುವದು ಸಾಧ್ಯವಿದ್ದರೆ ನಾನೇ ಅದಕ್ಕಾಗಿ ಪ್ರಾಯಶ್ಚಿತ್ತ ಮಾಡಿಕೊಂಡು ಈ ಪಾಪ ವಿಮೋಚನೆ ಮಾಡಲು ಕಾತರನಾಗಿದ್ದೇನೆ.

ಈ ಉದ್ದೇಶ ಸಾಧನೆಗಾಗಿ ನನಗಿರುವ ಮಾರ್ಗ ಅಹಿಂಸೆಯದು ಮತ್ತು ಸತ್ಯದ್ದು ಮಾತ್ರ. ಒಬ್ಬ ಅಸ್ಪೃಶ್ಯ ಮಗುವನ್ನು ನಾನು ದತ್ತು ಮಾಡಿಕೊಂಡಿದ್ದೇನೆ. ನನ್ನ ಹೆ0ಡತಿಯನ್ನು ನನ್ನ ಅಭಿಪ್ರಾಯಕ್ಕೆ ಸಂಪೂರ್ಣವಾಗಿ ಒಲಿಸಿಕೊಳ್ಳಲು ಆಗಿಲ್ಲ ಎಂಬುದನ್ನು ನಾನು ಒಪ್ಪಿಕೊಳ್ಳುತ್ತೇನೆ. ನಾನು ಆ ಮಗುವನ್ನು ಪ್ರೀತಿಸುವಂತೆ ಆಕೆ ಪ್ರೀತಿಸಲು ಸಾಧ್ಯವಾಗಿಲ್ಲ. ಆದರೆ ಸಿಟ್ಟಿನಿಂದ ನನ್ನ ಹೆಂಡತಿಯನ್ನು ಪರಿವರ್ತನೆ ಮಾಡಲು ಆಗದು. ಪ್ರೀತಿಯಿಂದಲೇ ಮಾಡಬೇಕು. ನಮ್ಮವರು ಯಾರಾದರೂ ನಿಮ್ಮ ವಿಷಯದಲ್ಲಿ ತಪ್ಪು ಮಾಡಿದ್ದರೆ ನಿಮ್ಮ ಕ್ಷಮೆ ಬೇಡುತ್ತೇನೆ. ನಾನು ಪೂನಾದಲ್ಲಿದ್ದಾಗ ಕೆಲವು ಅಸ್ಪೃಶ್ಯಬಂದು ಹಿಂದೂಗಳು ಅಸ್ಪೃಶ್ಯ ವಿಷಯಕ್ಕೆ ತಮ್ಮ ಮನೋಭಾವವನ್ನು ತಮ್ಮ ವರ್ತನೆಯನ್ನು ಬದಲಿಸಿಕೊಳ್ಳದಿದ್ದರೆ

ತಾವು ಹಿಂಸಾಪ್ರಯೋಗ ಮಾಡಬೇಕಾಗುತ್ತದೆಂದು ಹೇಳಿದರು. ಹಿಂಸೆಯಿಂದ ಅಸ್ಪೃಶ್ಯತೆಯನ್ನು ತೊಡೆದುಹಾಕಲು ಸಾಧ್ಯವೇ? ಅಸ್ಪೃಶ್ಯರ ವಿಮೋಚನೆಯು ಇಂಥ ವಿಧಾನಗಳಿಂದ ಬಂದೀತೇ? ಸರಿಯಾದ ಆಚರಣೆ ಮತ್ತು ಸಹನಶೀಲ ತರ್ಕ ಇವುಗಳಿಂದ ಮಾತ್ರ ಸಂಪ್ರದಾಯಸ್ಥ ಹಿಂದೂಗಳನ್ನು ಮತಾಂಧತೆಯಿಂದ ಪರಾವೃತ್ತಗೊಳಿಸಬಹುದು. ಅವರಲ್ಲಿ ಪರಿವರ್ತನೆ

ಬರುವವರೆಗೆ ಈಗಿರುವ ನಿಮ್ಮ ಸ್ಥಿತಿಯನ್ನು ಸಹನೆಯಿಂದ ನುಂಗಿಕೊಂಡಿರಬೇಕೆಂದು ಕೇಳಿಕೊಳ್ಳುತ್ತೇನೆ. ನಿಮ್ಮ ಜೊತೆಯಲ್ಲಿದ್ದು, ನಿಮ್ಮ ಸುಖ ದುಃಖಗಳಲ್ಲಿ ಪಾಲುಗೊಳ್ಳಲು ನಾನು ಸಿದ್ಧ, ಇತರ ಜಾತಿಗಳವರಿಗೆ ಯಾವ ದೇವಸ್ಥಾನದಲ್ಲಿ ಪ್ರವೇಶ ಇದೆಯೋ ಅವುಗಳಲ್ಲಿ ಪೂಜೆ ಮಾಡುವ ಹಕ್ಕು ನಿಮಗೂ ಇರಬೇಕು. ಇತರ ಜಾತಿಗಳವರ ಮಕ್ಕಳಿಗೆ ಯಾವ ಶಾಲೆಯಲ್ಲಿ ಪ್ರವೇಶ ಇದೆಯೋ, ಅಲ್ಲಿಗೆ ಯಾವ ಭೇದವೂ ಇಲ್ಲದೆ ನಿಮ್ಮ ಹುಡುಗರು ಹೋಗಬೇಕು. ದೇಶದ ಅತ್ಯುನ್ನತ ಪದವಿಗೆ, ವೈಸರಾಯ್ ಪದವಿಗೂ ಕೂಡ ನೀವು ಅರ್ಹರಾಗುವಂತೆ ಆಗಬೇಕು.

ಅಸ್ಪೃಶ್ಯತಾ ನಿವಾರಣೆಗೆ ನನ್ನ ವ್ಯಾಖ್ಯೆ ಇದು. ಆದರೆ ನನ್ನ ಧರ್ಮ ತೋರಿಸಿಕೊಟ್ಟ ಮಾರ್ಗದಲ್ಲಿ ನಡೆದು ಮಾತ್ರ ನಾನು ನಿಮಗೆ ನೆರವಾಗಬಲ್ಲೆ. ಪಾಶ್ಚಾತ್ಯ ಪದ್ಧತಿಗಳನ್ನುಅನುಸರಿಸಿ ಅಲ್ಲ. ಹಾಗೆ ಮಾಡಿದರೆ ಹಿಂದೂ ಧರ್ಮವನ್ನು ನಾನು ರಕ್ಷಿಸಲಾರೆ. ನಿಮ್ಮದು ಪವಿತ್ರ ಉದ್ದೇಶ, ಪವಿತ್ರ ಚಳವಳಿ. ದೇವ ವಿರುದ್ಧ ಮಾರ್ಗವನ್ನು ಅನುಸರಿಸಿದರೆ ಪವಿತ್ರ ಕಾರ್ಯ ಸಿದ್ಧಿಸಿತೇ? ಆದ್ದರಿಂದ ಪಾಶವೀ ಶಕ್ತಿಯ ಮೂಲಕ ನಿಮ್ಮ ಪರಿಸ್ಥಿತಿಯನ್ನು ಉತ್ತಮಗೊಳಿಸಿಕೊಳ್ಳುವ ಮಾರ್ಗವನ್ನು ಬಿಟ್ಟುಬಿಡಿರಿ ಎಂದು ನಾನು ವಿನಂತಿಸಿಕೊಳ್ಳುತ್ತೇನೆ. ಪ್ರಾಮಾಣಿಕವಾಗಿ, ಹೃದಯಪೂರ್ವಕವಾಗಿ, ತನ್ನ ಹೃದಯಸ್ಥ ಪರಮಾತ್ಮನನ್ನು ಧ್ಯಾನಿಸಿದರೆ ಮನುಷ್ಯನಿಗೆ ಮೋಕ್ಷ ಸಿಗುತ್ತದೆಂದು ಗೀತೆ ಹೇಳುತ್ತದೆ. ಧ್ಯಾನ ಜವಳಿ ದೇವರ ಬಾಗಿಲ ಕಾಯುವದು. ದೇವರ ಚಿತ್ತವನ್ನು ಕಾಯುತ್ತ ನಿಂತರೆ ಮೋಕ್ಷದ ಅತ್ಯುನ್ನತ ಆನಂದವೇ ಸಿಗುತ್ತದೆ ಎಂದ ಮೇಲೆ ಅಸ್ಪೃಶ್ಯತಾ ನಿವಾರಣೆಯೂ ಬೇಗನೇ ಆಗದಿದ್ದೀತೇ? ದೇವರ ಬಾಗಿಲ ಕಾಯುವದು ಎಂದರೆ ಹೆಚ್ಚು ಹೆಚ್ಚು ಪರಿಶುದ್ಧ ಪ್ರಾರ್ಥನೆಮಾಡಿ ಪರಿಶುದ್ಧತೆ ಪಡೆದರೆ ಅಸ್ಪೃಶ್ಯತಾ ನಿವಾರಣೆಯಾಗುತ್ತದೆ, ಸ್ವರಾಜ್ಯ ಪ್ರಾಪ್ತಿಯೂ ಹತ್ತಿರ ಬರುತ್ತದೆ.

(ಈ ಭಾಷಣ ಯಂಗ್ ಇಂಡಿಯಾ ಪತ್ರಿಕೆಯಲ್ಲಿ 22–1–1925 ರಂದು ಪ್ರಕಟವಾಗಿದೆ )



# ಮಂಗಳೂರಿನಲ್ಲಿ ಗಾಂಧೀಜಿ ಮಂದಿರ

ಪರಮ ಪೂಜ್ಯ ರಾಷ್ಟ್ರಪಿತ ಮಹಾತ್ಮಾ ಗಾಂಧಿಯವರಿಗೆ ಮಂಗಳೂರಿನಲ್ಲಿರುವ ಮಂದಿರದಲ್ಲಿ ಈಗಲೂ ನಿತ್ಯ ಪೂಜೆ ನಡೆಯುತ್ತದೆ.

ಮಂಗಳೂರಿಗೆ ಗಾಂಧೀಜಿಯವರು ಮೂರು ಬಾರಿ ಭೇಟಿ ನೀಡಿದ್ದರು.1920 ರಲ್ಲಿ ಮೊದಲ ಭೇಟಿ.1934 ರಲ್ಲಿ ಕೊನೆಯ ಭೇಟಿ.ಗಾಂಧೀಜಿಯವರ ಭಾಷಣದಿಂದ ಪ್ರೇರಣೆ ಪಡೆದು ಮಂಗಳೂರಿನ ಜನ ಯಥೇಷ್ಟ ದಾನ ನೀಡಿದ್ದರು.1920 ರಲ್ಲಿ ಅವರನ್ನು ಹಂಪನಕಟ್ಟೆ,ಕಾರ್ಸ್ಟ್ರೀಟ್ ಮಾರ್ಗವಾಗಿ ಮೆರವಣಿಗೆಯಲ್ಲಿ ಕರೆದೊಯ್ಯಲಾಗಿತ್ತು.

ಗಾಂಧೀಜಿಯಿಂದ ಪ್ರಭಾವಿತರಾದ ನರ್ಸಪ್ಪ ಸಾಲಿಯಾನ್ ಐದು ಗ್ರಾಮಗಳ ಮುಖ್ಯಸ್ಥರಾಗಿದ್ದರು.ಅವರು ಮಂಗಳೂರಿನಲ್ಲಿ ನಡೆದ ಹೋರಾಟಗಳ ಮುಂಚೂಣಿಯ ನಾಯಕರೂ ಆಗಿದ್ದರು.ಗಾಂಧೀಜಿ ಹುತಾತ್ಮರಾದ ನಂತರ ನರ್ಸಪ್ಪ ಸಾಲಿಯಾನ್,ಸೋಮಪ್ಪ ಪಂಡಿತ,ವೆಂಕಪ್ಪ ಅವರು ಗಾಂಧೀಜಿಯ ತತ್ವಾದರ್ಶಗಳ ನೆನಪನ್ನು ಸಾರ್ವಕಾಲಿಕ ಪ್ರೇರಣೆಯಾಗಿ ಉಳಿಸಬೇಕೆಂದು ಗಾಂಧೀಜಿ ಗುಡಿಯನ್ನು ಕಟ್ಟುವ ಚಿಂತನೆ ನಡೆಸಿದರು.

ಮಂಗಳೂರಿನ ಹೃದಯ ಭಾಗವಾದ ಕಂಕನಾಡಿಯಲ್ಲಿ,ತುಳುನಾಡಿನ ಜನಪದ ವೀರರಾದ ಕೋಟಿ–ಚೆನ್ನಯ ದೈವಗಳ ಬ್ರಹ್ಮ ಬೈದರ್ಕಳ ಗರಡಿ ಇದೆ.ನರ್ಸಪ್ಪ ಸಾಲಿಯಾನ್ ಅವರ ಪ್ರಸ್ತಾವನೆಯನ್ನು ಆಡಳಿತ ಮಂಡಳಿಯವರೂ ಒಪ್ಪಿದರು.1948 ಡಿಸೆಂಬರ್ 15 ರಂದು ಗಾಂಧೀಜಿಯ ಮಣ್ಣಿನ ಮೂರ್ತಿಯನ್ನು ಮಾಡಿ ಇಲ್ಲಿ ಸ್ಥಾಪಿಸಲಾಯಿತು.ನಂತರ ಆ ಮೂರ್ತಿಯನ್ನು ತೆಗೆದು ಭಗವದ್ಗೀತೆಯನ್ನು ಓದುತ್ತಿರುವ ಭಂಗಿಯಲ್ಲಿರುವ ಗಾಂಧೀಜಿಯ ಬಿಳಿಯ ಅಮೃತ ಶಿಲೆಯ ಮೂರ್ತಿಯನ್ನು,ಬ್ರಹ್ಮಶ್ರೀ ನಾರಾಯಣ ಗುರುಗಳ ಗುಡಿಯ ಪಕ್ಕದಲ್ಲಿ ಸ್ಥಾಪಿಸಲಾಯಿತು.

ಇಲ್ಲಿ ಪ್ರತಿನಿತ್ಯ ಗಾಂಧೀಜಿಗೆ ತ್ರಿಕಾಲ ಪೂಜೆ ನಡೆಯುತ್ತಿದೆ.ಒಂದು ಕುಡ್ತೆ ಹಾಲು

ಮತ್ತು ಬಾಳೆ ಹಣ್ಣಿನ ನೈವೇದ್ಯವನ್ನು ಗಾಂಧೀಜಿಗೆ ಮಾಡಲಾಗುತ್ತದೆ. ಅಕ್ಟೋಬರ್ 2 ರಂದು ಗಣಪತಿ ವಿಗ್ರಹ ಮತ್ತು ಬ್ರಹ್ಮ ಬೈದರ್ಕಳ ಮೂರ್ತಿಯ ಉತ್ಸವ ಮಾಡಲಾಗುತ್ತದೆ.ಉತ್ಸವವು ಗಾಂಧಿ ಗುಡಿಯ ಬಳಿ ನಿಂತು ವಿಶೇಷ ಆರತಿ ಸೇವೆ ಮಾಡಿ ಮುಂದುವರಿಯುತ್ತದೆ.

ಇಲ್ಲೊಂದು ವಿಶಿಷ್ಟ ರೂಪಕವಿದೆ.ಗಾಂಧೀಜಿ ಮತ್ತು ನಾರಾಯಣ ಗುರುಗಳು ಜೊತೆ ಜೊತೆಯಾಗಿದ್ದಾರೆ.ನಾರಾಯಣ ಗುರುಗಳು ರಾಜಕೀಯದಲ್ಲಿರಲಿಲ್ಲ ಎಂಬುದನ್ನು ಬಿಟ್ಟರೆ ಗಾಂಧೀಜಿ ಮತ್ತು ನಾರಾಯಣ ಗುರುಗಳ ತತ್ವಗಳು ಒಂದೇ ಬಗೆಯವು.ಇಬ್ಬರೂ ವಿಶ್ವಾತ್ಮಕ ಜೀವನ ದೃಷ್ಟಿ ಇದ್ದ ಧಾರ್ಮಿಕರು.ಗಾಂಧೀಜಿಯ ದಲಿತೋದ್ಧಾರಕ್ಕೆ ನಾರಾಯಣ ಗುರುಗಳಿಂದಲೂ ಅವರು ಸ್ಫೂರ್ತಿಯನ್ನು ಪಡೆದಿದ್ದರು.ಇಬ್ಬರೂ ಉಪನಿಷತ್ ತತ್ವಜ್ಞಾನವನ್ನು ನೆಚ್ಚಿಕೊಂಡವರು.

ಕೋಟಿ–ಚೆನ್ನಯರು ತುಳುನಾಡಿನ ಹೆಮ್ಮೆಯ ಜನಪದ ವೀರರು.ಸಶಸ್ತ್ರ ಹೋರಾಟಗಾರರೇ.ಅವರ ಕಾಲಮಾನ ಸಶಸ್ತ್ರ ಹೋರಾಟದ್ದಾಗಿತ್ತೆ ಹೊರತು ಸಾಂವಿಧಾನಿಕ ಹೋರಾಟದ ಕಾಲವಲ್ಲ.ಅವರೂ ಮೋಸಕ್ಕೆ ಬಲಿಯಾಗಿ ಹುತಾತ್ಮರಾದವರು.ಗಾಂಧೀಜಿಯನ್ನು ನಂಬಿಸಿ ಕೊಲ್ಲಲಿಲ್ಲ ಎನ್ನುವುದನ್ನು ಬಿಟ್ಟರೆ,ಪ್ರಾರ್ಥನೆಗೆ ಹೋಗುತ್ತಿದ್ದವನನ್ನು ಗೊತ್ತಿಲ್ಲದೆ ಕೊಲ್ಲುವುದು ಮೋಸದ ಸ್ಥಾನದಲ್ಲೆ ಇದೆ.

ಆರಾಧಿಸಲ್ಪಡುವ ನಾರಾಯಣ ಗುರು,ಗಾಂಧೀಜಿ,ಕೋಟಿ–ಚೆನ್ನಯ ಎಲ್ಲರೂ ಸಮಾಜಕ್ಕಾಗಿ ಬದುಕಿದ ಅಪ್ಪಟ ಪ್ರಾಮಾಣಿಕರು.ಅವರ ಸಿದ್ಧಾಂತ ಮತ್ತು ವಿಚಾರಗಳ ಬಗ್ಗೆ ಭಿನ್ನಾಭಿಪ್ರಾಯ ಸಾಧ್ಯವೆ ಹೊರತು ಅವರ ಪ್ರಮಾಣಿಕತೆಯ ಬಗ್ಗೆ ಪ್ರಶ್ನೆಗಳು ಇದು ವರೆಗೂ ಯಾರಿಂದಲೂ ಉದ್ಭವಿಸಿಲ್ಲ.

ಗಾಂಧೀಜಿಗೆ ಗುಡಿ ಕಟ್ಟಿ ಪೂಜಿಸುವುದು ವಿಡಂಬನೆಯಾಗುವುದಿಲ್ಲ. ಏಕೆಂದರೆ ಅವರು ಸನಾತನ ಧಾರ್ಮಿಕ ಪರಂಪರೆಯ ಶಿಶುವಾಗಿಯೆ ಬಂದವರು ಹೊರತು ಅದನ್ನು ತಿರಸ್ಕರಿಸಿ ನಿಂತವರಲ್ಲ. ಗಾಂಧೀಜಿಯ ತತ್ವಾದರ್ಶಗಳು ಸನಾತನ ಪರಂಪರೆಯೊಂದಿಗೇ ಮುಂದುವರಿಯುವಂತಹವು ಹೊರತು ಅದರಿಂದ ಕಳಚಿಕೊಳ್ಳುವುದಿಲ್ಲ.ಆದ್ದರಿಂದ ಗಾಂಧಿ ಗುಡಿಯಲ್ಲಿ ಯಾವ ವಿಡಂಬನೆಯೂ ಇಲ್ಲ.

ತನ್ನ ಆದರ್ಶವನ್ನು ದೇವರ ರೂಪದಲ್ಲಿ ಕಂಡುಕೊಳ್ಳುವುದು ಹಿಂದೂ ಜೀವನ ಪದ್ಧತಿಯಾಗಿದೆ.ಪ್ರಶ್ನೆ ಇರುವುದು ಆ ಆದರ್ಶಗಳ ಪ್ರೇರಣೆಯನ್ನು ಪಡೆಯುತ್ತೇವೆಯೊ ಇಲ್ಲವೊ ಎನ್ನುವುದರಲ್ಲಿ ಮಾತ್ರ.

**ಅರವಿಂದ ಚೊಕ್ಕಾಡಿ (ಫೇಸ್ ಬುಕ್ ಪುಟದಿಂದ)**







(ಈ ಲಿಂಕ್ ತೆರೆದು ಹಳೆಯ ಪುಸ್ತಕ 'ಗಾಂಧಿ ದರ್ಶನ' ವನ್ನು ನೋಡಬಹುದು, ಓದಬಹುದು)

# ಮಹಾತ್ಮ ಗಾಂಧಿಯವರ ಮಹತ್ವಗಳು

- ಇಂಡಿಯಾ ಅಲ್ಲದೆ, ಲಂಡನ್, ಅಮೆರಿಕೆ ,ಸೌತ್ ಆಫ್ರಿಕೆ, ಸ್ವಿಟ್ಜರ್ ಲ್ಯಾನ್ಡ್, ಫ್ರಾನ್ಸ್,ಕೆನಡಾ, ಸ್ಪೇನ್, ಉಗಾಂಡಾ, ದುಬೈ, ಶ್ರೀಲಂಕಾ ಹೀಗೆ ಜಗತ್ತಿನ 184 ರಾಷ್ಟಗಳ ಪ್ರಮುಖ ಸ್ಥಳಗಳಲ್ಲಿ ನಮ್ಮ ರಾಷ್ಟಪಿತನ ಪ್ರತಿಮೆಗಳು ಪ್ರತಿಸ್ಥಾಪನೆಗೊಂಡಿವೆ .
- ಡಿಸೆಂಬರ್ 14 , 2022 ರಂದು ವಿಶ್ವಸಂಸ್ಥೆಯ ಕೇಂದ್ರ ಕಚೇರಿಯಲ್ಲಿ ಗಾಂಧಿ ಪ್ರತಿಮೆ ಲೋಕಾರ್ಪಣೆಯಾಗಿದೆ. ಈ ಪ್ರತಿಷ್ಠಿತ ಸ್ಥಾನ ಪಡೆದ ಭಾರತ ಅಷ್ಟೇ ಅಲ್ಲ, ಪ್ರಪಂಚದ ಏಕೈಕ ನೇತಾರ ಬಾಪೂ.
- ಕೇಂಬ್ರಿಡ್ಜ್ ವಿಶ್ವ ವಿದ್ಯಾಲಯದಲ್ಲಿ ಮಹಾತ್ಮ ಗಾಂಧೀಜಿಯವರ ಕುರಿತು ಬೋಧನೆ ಮಾಡಲಾಗುತ್ತಿದೆ. ಬಾಪೂ ಪ್ರತಿಪಾದಿಸಿದ ತತ್ವ – ಸಿದ್ಧಾಂತಗಳು, ಸತ್ಯ ಅಹಿಂಸಾ ಮಂತ್ರ, ಅವರು ನಡೆದು ಹೋದ ಶಾಂತಿಯ ಪಥ ಮನುಕುಲ ಉಳಿಯಲು ಅಂತಿಮ ಮಾರ್ಗವೆಂದು ಮನವರಿಕೆ ಮಾಡಿ ಕೊಡಲಾಗುತ್ತಿದೆ.
- ಸರ್ವರನ್ನು ಪ್ರೀತಿಸುವುದು ಗಾಂಧೀಜಿಯವರ ಜೀವನದ ಪ್ರಮುಖ ಆದ್ಯತೆಯಾಗಿತ್ತು, ಮಹಾತ್ಮನ ಮಾನವೀಯ ಮೌಲ್ಯಗಳನ್ನು ಬೋಧಿಸಲಾಗುತ್ತಿದೆ.
- ಚೀನಾ, ಜಪಾನ್ ಗಳಲ್ಲಿ 0 ದಿಂದ 15 ನೇ ತರಗತಿಯವರೆಗೆ ಗಾಂಧೀಜಿಯವರ ಕುರಿತು ಪಾಠ ಮಾಡಲಾಗುತ್ತಿದೆ .
- ಪ್ರಪಂಚದ 1262 ಕಡೆ ಗಾಂಧೀಜಿಯವರ **Mahatma Gandhi research centre (MGRC)** ಹೆಸರಿನ ಅಧ್ಯಯನ ಕೇಂದ್ರಗಳಿವೆ.
- ಚರ್ಚಿಲ್ – ಒಂದು ಅರ್ಥದಲ್ಲಿ ನಮಗೆ ರಾಜಕೀಯ ವೈರಿಯಾಗಿದ್ದವರು. ಎರಡು ಸಲ ಇಂಗ್ಲೆಂಡ್ ನ ಪ್ರಧಾನಿ ಕೂಡಾ ಆಗಿದ್ದವರು. 1931ರಲ್ಲಿ ಗಾಂಧೀಜಿಯವರನ್ನು 'ಹಾಫ್ ನೇಕೆಡ್ ಫಕೀರ ' ಎಂದು ಮೂದಲಿಸಿದ್ದವರು. 'ಸ್ವಾತಂತ್ರ್ಯ ಕೇಳಲು ಬಂದ ಇಂಡಿಯನ್ ಬೆಗ್ಗರ್' ಎಂದು ಅಪಮಾನ ಮಾಡಿದ್ದವರು. ಗಾಂಧಿಯನ್ನು ಕಂಡರೆ ನಖಶಿಖಾಂತ ಉರಿಯುತ್ತಿದ್ದವರು ಮತ್ತು ಕೊನೆಯವರೆಗೂ ದ್ವೇಷ ಮಾಡಿದವರು . 1948 ರಲ್ಲಿ ಹಂತಕನ ಗುಂಡಿಗೆ ಸರ್ವೋದಯ ಫಿಲಾಸಫಿಯ ಸರ್ವೋಚ್ಚ ನೇತಾರ ಬಾಪೂಜಿ ಬಲಿಯಾದರು. ಆಗ ನಿವೃತ್ತ ಜೀವನದಲ್ಲಿದ್ದ ಚರ್ಚಿಲ್ ಗಾಂಧಿ ಹತ್ಯೆಯ ಸುದ್ದಿಯನ್ನು ಕೇಳಿದ ಕೂಡಲೇ ಈ ರೀತಿ ಉದ್ಗಾರ ತೆಗೆದರು. " ಗಾಂಧಿ ಕೊಲೆಯಾದರು ಅನ್ನುವ ಸುದ್ದಿಯನ್ನು ಕೇಳಿ ನನ್ನ ಹೃದಯ ಸ್ತಂಬಿತಗೊಂಡಿತು ". ಪ್ರತಿ ಸಲವೂ ಗಾಂಧಿ 'ಸಹೃದಯ ಸ್ನೇಹಿತ' ಎಂದು ನನ್ನನ್ನು ಕರೆಯುತ್ತಿದ್ದಾಗ, ಆತನಿಗೆ ಸಕಾರಾತ್ಮಕವಾಗಿ ಸ್ಪಂದಿಸದೇ ನನ್ನ ಅಧಿಕಾರ ದರ್ಪದಿಂದ ' ಅನರ್ಹ ವ್ಯಕ್ತಿಯಂತೆ ' ನಡೆದುಕೊಂಡೆ ಎಂದು ತನ್ನ ಆತ್ಮ ಚರಿತ್ರೆಯಲ್ಲಿ ಚರ್ಚಿಲ್ ಬರೆದುಕೊಂಡಿದ್ದಾರೆ .
- ಜಗತ್ ಪ್ರಸಿದ್ಧ ವಿಜ್ಞಾನಿ ಆಲ್ಬರ್ಟ್ ಐನ್‌ಸ್ಟೀನ್ ಅವರು ತಮ್ಮ ಹೊಸ ಮನೆ ಕಟ್ಟಿದಾಗ ಅಲಂಕಾರಕ್ಕಾಗಿ ಯಾರ ಭಾವಚಿತ್ರವನ್ನು ಹಾಕಿಕೊಳ್ಳಲು ಒಪ್ಪಲಿಲ್ಲ ಗಾಂಧೀಜಿಯವರ ಭಾವಚಿತ್ರವನ್ನು ಬಿಟ್ಟು. ಅದೇ ರೀತಿ ಅಮೆರಿಕೆಯ ನಿಗ್ರೋಗಳ ನಾಯಕ ಡಾಕ್ಟರ್ ಮಾರ್ಟಿನ್ ಲೂಥರ್ ಕಿಂಗ್ ಜ್ಯೂನಿಯರ್, ಬರಾಕ್ ಒಬಾಮಾ ಮತ್ತು ಇಸ್ರೇಲ್ ಪ್ರಥಮ ಪ್ರಧಾನಿ ತಮ್ಮ ವೈಯಕ್ತಿಕ ಕೊಠಡಿಯಲ್ಲಿ ಗಾಂಧೀಜಿಯವರ ಭಾವಚಿತ್ರವನ್ನು ಮಾತ್ರ ಹಾಕಿಕೊಂಡರು. ಅಂತೆಯೇ, ತಮಿಳುನಾಡಿನ ಜೆ.ಸಿ.ಕುಮಾರಪ್ಪ ಮತ್ತು ಬೆಂಗಳೂರಿನ ನರಸಿಂಹಯ್ಯ ಅವರೂ ಸಹ ಗಾಂಧೀಜಿಯವರ ಭಾವಚಿತ್ರವನ್ನು ಬಿಟ್ಟು ಬೇರೆ ಯಾವ ನಾಯಕರ ಫೋಟೋವನ್ನು ಹಾಕಿಕೊಂಡಿರಲಿಲ್ಲ.

(ಸಂಗ್ರಹ : ನೇತಾಜಿ ಗಾಂಧಿ)






**Karnataka Gandhi Smarak Nidhi**
Gandhi Bhavan, Bengaluru

International Seminar to commemorate
**75th Anniversary of the Central Gandhi Smarak Nidhi, New Delhi**

# MAHATMA GANDHI FOR THE 21ST CENTURY

## Building A Future of Peace, Justice, Fraternity and Sustainable Development

 **24-25 August 2024**

 **Gandhi Bhavan**
Kumara Park East, Bengaluru - 560 001

The Gandhi Smarak Nidhi Karnataka is greatly pleased to invite you to a two-day International Seminar in Bengaluru, India on 24-25 August 2024. We are hosting this seminar to commemorate the 75th anniversary of the Central Gandhi Smarak Nidhi, a pre-eminent Gandhian organisation founded in 1949.

# ನವದೆಹಲಿಯ ಕೇಂದ್ರ ಗಾಂಧಿ ಸ್ಮಾರಕ ನಿಧಿಯ 75ನೇ ವರ್ಷದ ಸಂಸ್ಮರಣೆಗಾಗಿ ಅಂತರ ರಾಷ್ಟ್ರೀಯ ವಿಚಾರ ಸಂಕಿರಣ

# 21ನೇ ಶತಮಾನಕ್ಕೆ ಮಹಾತ್ಮ ಗಾಂಧೀಜಿ

## ಭವಿಷ್ಯದ ಶಾಂತಿ, ನ್ಯಾಯ, ಸಹೋದರತ್ವ ಮತ್ತು ಸುಸ್ಥಿರ ಅಭಿವೃದ್ಧಿಯ ನಿರ್ಮಾಣಕ್ಕಾಗಿ

### ವಿಚಾರ ಸಂಕಿರಣ ಏಕೆ ?

**ಗಾಂಧೀ ವಾದ ಮತ್ತು ಇತರೆ ಮಾನವತಾ ವಾದಗಳು ಹಾಗೂ ಕ್ರಿಯೆಗಳ ಹಿನ್ನೆಲೆಯಲ್ಲಿ ಸಮಕಾಲೀನ ಜಾಗತಿಕ ಸವಾಲುಗಳನ್ನು ಅರಿಯುವ ಒಂದು ಪ್ರಯತ್ನ .**

ಮಹಾತ್ಮ ಗಾಂಧೀಜಿಯವರು ಆಧುನಿಕ ಮಾನವಕುಲ ಇತಿಹಾಸದಲ್ಲಿ ಶಾಂತಿ , ನ್ಯಾಯ ಮತ್ತು ವಿಶ್ವ ಸಹೋದರತೆಯ ಮಹಾ ಸಮರ್ಥಕರು . ಬ್ರಿಟಿಷ್ ವಸಾಹತುಶಾಹಿ ಆಳ್ವಿಕೆಯಿಂದ ಭಾರತವನ್ನು ಬಿಡಿಸಿ ಸ್ವಾತಂತ್ರ್ಯ ತಂದುಕೊಡುವಲ್ಲಿ ಇವರು ಪ್ರಖ್ಯಾತ ನಾಯಕರಾದರೂ ನಿಜವಾದ ಅರ್ಥದಲ್ಲಿ ಗಾಂಧೀಜಿಯವರು ಜಗತ್ತಿನ ನಾಗರಿಕರಾಗಿ ವಿಶ್ವ

ಮಾನವರಾಗಿದ್ದರು. ಉತ್ತಮ ಹೊಸ ಜಗತ್ತಿನ ನಿರ್ಮಾಣದ ನಿಟ್ಟಿನಲ್ಲಿ ಭಾರತದ ರಾಷ್ಟೀಯ ವಿಮೋಚನೆಯು ಒಂದು ಅವಿಭಾಜ್ಯ ಅಂಗ ಮತ್ತು ವೇಗವರ್ಧಕ ಎಂದು ಅವರು ಕಲ್ಪಿಸಿದ್ದರು .

ಸತ್ಯ ಮತ್ತು ಅಹಿಂಸೆಗಳು ಇಡೀ ಜಗತ್ತಿಗೆ ಪ್ರಸ್ತುತವಾಗುವ ಶಾಶ್ವತ ನೈತಿಕ ಮೂಲಸೂತ್ರಗಳು ಎಂದು ಸಾರಿದ ವೀರಾಗ್ರಣಿ . ಕಳೆದ ಶತಮಾನದ ಎಲ್ಲ ರಾಷ್ಟೀಯ ಸ್ವಾತಂತ್ರ್ಯ ಹೋರಾಟಗಳ ನಾಯಕರ ಪೈಕಿ ಗಾಂಧೀಜಿ ತಮ್ಮ ಮಾನವೀಯತೆಯ ಅತ್ಯಗತ್ಯ ಒಗ್ಗಟ್ಟು ,ರಾಷ್ಟೀಯತೆಯನ್ನು ಮೀರಿದ ಜನಾಂಗ , ಧರ್ಮ , ಜಾತಿ ಮತ್ತು ವರ್ಗಗಳ ಎಲ್ಲೆಯನ್ನು ಮೀರಿದ ತಮ್ಮ ಅಚಲ ನಿಷ್ಠೆಯಿಂದಾಗಿ ಭಿನ್ನವಾಗಿ ನಿಲ್ಲುತ್ತಾರೆ .

ಎಪ್ಪತ್ತೈದು ವರ್ಷಗಳ ಹಿಂದೆ ಮತೀಯ ಉಗ್ರಗಾಮಿಯ ಗುಂಡಿಗೆ ಬಲಿಯಾಗಿ ಹುತಾತ್ಮರಾದರು . ಆದರೆ ಅವರ ಚಿಂತನೆ ಮತ್ತು ಆದರ್ಶಗಳು ಇತರೆ ದೇಶ ಮತ್ತು ಸಂಸ್ಕೃತಿಗಳಿಗೆ ಸೇರಿದ ಸಂತರು ಮತ್ತು ಸಾಮಾಜಿಕ ಸುಧಾರಕರ ರೀತಿಯಲ್ಲಿ ಅಮರವಾಗಿವೆ .

ಭಾರತ ಮತ್ತು ಇತರೆ ಜಗತ್ತು ಧಾರ್ಮಿಕ ಅಸಾಮರಸ್ಯದ ಗಂಭೀರ ಅಪಾಯವನ್ನು ಎದುರಿಸುತ್ತಿದ್ದ ಕಾಲದಲ್ಲಿ ; ಗಾಂಧೀಜಿಯವರು ಪರಸ್ಪರ ಅರಿತುಕೊಳ್ಳುವ , ಗೌರವಿಸುವ, ನಂಬಿಕೆ ವಿಶ್ವಾಸಗಳಿಂದ , ಶಾಂತಿಯುತ ಸಹಬಾಳ್ವೆ ನಡೆಸಬೇಕು ಎಂದು ಒತ್ತಾಯಿಸುವ ದನಿಯಲ್ಲಿ ನಮ್ಮೊಡನೆ ಮಾತನಾಡುತ್ತಿದ್ದರು . ಜಗತ್ತಿನೊಳಗೆ ಹಾಗೂ ರಾಷ್ಟಗಳ ನಡುವೆ ತೀವ್ರ ಅಸಮಾನತೆ ತುಂಬಿದ್ದ ಕಾಲದಲ್ಲಿ ಗಾಂಧೀಜಿಯವರ ' ಸರ್ವೋದಯ ' ( ಎಲ್ಲರ ಅಭ್ಯುದಯ ) ಮತ್ತು ' ಅಂತ್ಯೋದಯ' ( ಕಟ್ಟ ಕಡೆಯ ವ್ಯಕ್ತಿಯ ಅಭ್ಯುದಯ ) ಪರಿಕಲ್ಪನೆಗಳು ನಮಗೆ ನ್ಯಾಯ ಮತ್ತು ಸಮಾನ ಜಗತ್ತಿನ ಮಾರ್ಗವನ್ನು ತೋರಿಸಿದವು .

ಸಾಮೂಹಿಕ ವಿನಾಶ ಎಸಗುವ ಅಣ್ವಸ್ತ್ರ ಮತ್ತು ಇತರೆ ಆಯುಧಗಳನ್ನು ಗಾಂಧೀಜಿಯವರು ' ಮಾನವೀಯತೆಯ ವಿರುದ್ಧದ ಪಾಪಗಳು ' ಎಂದು ದಿಟ್ಟವಾಗಿ ಖಂಡಿಸಿದರು . ಈ ಹೇಳಿಕೆಯು ಜಗತ್ತಿನಾದ್ಯಂತ ಶಾಂತಿ ಮತ್ತು ನಿಶ್ಯಸ್ತ್ರೀಕರಣ ಪ್ರಚಾರಕ್ಕೆ ಶಕ್ತಿ ತುಂಬಿತು . ಗಾಂಧೀಜಿ ಸುಸ್ಥಿರ ಅಭಿವೃದ್ಧಿಯ ಹರಿಕಾರರು . " ಭೂಮಿ ತಾಯಿ ಪ್ರತಿಯೊಬ್ಬರ ಅಗತ್ಯವನ್ನು ಪೂರೈಸಬಲ್ಲದೇ ಹೊರತು ಪ್ರತಿಯೊಬ್ಬರ ದುರಾಶೆಯನ್ನು ಈಡೇರಿಸಲಾರದು " ಎನ್ನುವ ಗಾಂಧೀಜಿಯವರ ಉಕ್ತಿಯು ಜಾಗತಿಕ ಹಸಿರು ಚಳವಳಿಯ ಬೀಜ ಮಂತ್ರವಾಗಿದೆ. ಗಾಂಧೀಜಿ ಮಹಿಳೆಯನ್ನು ಪ್ರೀತಿ , ಸುರಕ್ಷತೆ , ಮತ್ತು ಕರುಣೆಯ ಸ್ವರೂಪಿಣಿ ಎಂದು ಬಣ್ಣಿಸಿದ್ದಾರೆ . ಮಾನವ ಜನಾಂಗದ ಭವಿಷ್ಯದ ವಿಕಾಸವನ್ನು ಮಹಿಳೆಯರೇ ಮುನ್ನಡೆಸಲಿದ್ದಾರೆ ಎಂದು ಭವಿಷ್ಯ ನುಡಿದಿದ್ದಾರೆ .

ಮಾನವ ಸುರಕ್ಷತೆಗೆ ಸಂಬಂಧಿಸಿದ ಶಿಕ್ಷಣ , ಅರೋಗ್ಯ ರಕ್ಷಣೆ , ಪೌಷ್ಟಿಕಾಂಶ , ನೈರ್ಮಲ್ಯ , ಗ್ರಾಮೀಣ ಕೈಗಾರಿಕೆ. ಇತ್ಯಾದಿ ಕ್ಷೇತ್ರಗಳಲ್ಲಿ ಗಾಂಧೀಜಿ ನಿರ್ಣಾಯಕ ಪ್ರಯೋಗಗಳನ್ನು ನಡೆಸಿದ್ದಾರೆ . ಇಂದು ಕಾಲ ಬದಲಾಗಿದ್ದರೂ ಅವರ ಪ್ರಯೋಗಗಳ

ಮೂಲಸಾರವು ನಮ್ಮ ಜಗತ್ತಿಗೆ ಪ್ರಮುಖ ಪಾಠಗಳನ್ನು ಕಲಿಸಿದೆ . ಗಾಂಧಿ ಆಧುನಿಕ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ವಿರೋಧಿಸುತ್ತಿದ್ದರು ಎನ್ನುವ ತಪ್ಪು ಕಲ್ಪನೆ ವ್ಯಾಪಕವಾಗಿ ಹಬ್ಬಿದೆ. ಆದರೆ ಇದು ಸತ್ಯವಲ್ಲ. ಅವರು ಪ್ರಣಯದ ಎಲ್ಲೆ , ವೈಜ್ಞಾನಿಕ ಜ್ಞಾನ ಮತ್ತು ತಾಂತ್ರಿಕ ಆವಿಷ್ಕಾರಗಳ ಪ್ರತಿಪಾದಕರಾಗಿದ್ದರು . ಇವು ಮಾನವೀಯತೆಯ ತೊಂದರೆಗಳನ್ನು ನಿವಾರಿಸುತ್ತವೆ ; ಜಗತ್ತಿನ ನಿಗೂಢತೆಯ ಹಿಂದೆ ಅಡಗಿರುವ ಸತ್ಯವನ್ನು ಹುಡುಕಲು ನೆರವಾಗುತ್ತವೆ ಎನ್ನುವ ಬಗ್ಗೆ ಅವರಿಗೆ ಅಪರಿಮಿತ ವಿಶ್ವಾಸವಿತ್ತು . " ಪ್ರತಿಯೊಂದನ್ನೂ ವಿಜ್ಞಾನವನ್ನಾಗಿ ಅಥವಾ ಪ್ರಣಯವನ್ನಾಗಿ ಪರಿವರ್ತಿಸಿ ಕೊಳ್ಳಬಹುದು " ಎಂದು ಗಾಂಧಿ ಹೇಳಿದ್ದಾರೆ . ವಿಜ್ಞಾನ ಮತ್ತು ತಾಂತ್ರಿಕತೆಯನ್ನು ಅನೈತಿಕವಾಗಿ ಮತ್ತು ವಿಚ್ಛಿದ್ರಕಾರಕವಾಗಿ ಬಳಸಿಕೊಳ್ಳುವುದರ ವಿರುದ್ಧ ಇದು ಗಾಂಧೀಜಿ ನೀಡಿದ ಎಚ್ಚರಿಕೆಯಾಗಿತ್ತು . 21 ನೇ ಶತಮಾನವು ಕ್ರಾಂತಿಕಾರಿ ತಂತ್ರಜ್ಞಾನಗಳಾದ ಕೃತಕ ಬುದ್ದಿವಂತಿಕೆ , ರೊಬೊಟಿಕ್ಸ್ , ತಳಿ ವಿಜ್ಞಾನಗಳ ಮೂಲಕ ರೂಪಿತಗೊಳ್ಳಲಿರುವುದರಿಂದ ಇವುಗಳ ಸಾಧ್ಯತೆ ಮತ್ತು ಅಪಾಯಗಳ ಬಗ್ಗೆ ಅರಿತುಕೊಳ್ಳುವ ಅಗತ್ಯವಿದೆ.

ಗಾಂಧೀಜಿಯವರ ಬಗ್ಗೆ ಇನ್ನೊಂದು ಅಪಪ್ರಚಾರ ವಿಪರೀತವಾಗಿ ಹಬ್ಬುತ್ತಿದೆ. ಗಾಂಧೀಜಿಯವರು ಸ್ವದೇಶೀ ( ರಾಷ್ಟ್ರೀಯ ಸ್ವಾವಲಂಬನೆ ) ಆಂದೋಲನದ ರೂವಾರಿ . ಹೀಗಾಗಿ ಅವರು ಅಂತರರಾಷ್ಟ್ರೀಯ ಸಹಕಾರವನ್ನು ಅಪೇಕ್ಷಿಸುವುದಿಲ್ಲ ಎನ್ನುವ ಅಪಪ್ರಚಾರ ವಿಪರೀತವಾಗಿ ಹಬ್ಬಿದೆ. ಇದು ನಿಜವಲ್ಲ . ಅವರು ಸ್ಥಳೀಯತೆ ಮತ್ತು ಜಾಗತಿಕತೆಯನ್ನು ಸಮತೋಲನಗೊಳಿಸಲು ಬಯಸುತ್ತಿದ್ದರು . ರಾಷ್ಟ್ರಗಳ ನಡುವೆ ಪರಸ್ಪರ ಅವಲಂಬನೆ ರಾಷ್ಟ್ರಗಳ ಸ್ವಾಲಂಬನೆಯಷ್ಟೇ ಅಗತ್ಯ ಎನ್ನುವುದು ಅವರ ಆಶಯವಾಗಿತ್ತು .

ಗಾಂಧಿ ಅತ್ಯಂತ ಜನತಂತ್ರವಾದಿಯಾಗಿದ್ದರು . ತಮ್ಮ ಮೂಲ ಬದ್ಧತೆಗಳ ಬಗ್ಗೆ ಅವರಿಗೆ ಅಚಲ ನಿಷ್ಠೆ ಇದ್ದಾಗಿಯೂ ಅವರು ಎಂದೂ ಕಟ್ಟಾ ಸಿದ್ದಾಂತಿಯಾಗಿರಲಿಲ್ಲ . ಹೊಸ ಸನ್ನಿವೇಶಗಳಿಂದ ಮತ್ತು ಇತರರ ದೃಷ್ಟಿಕೋನದಿಂದ ಕಲಿಯಲು ಅವರು ಸದಾ ಮುಕ್ತವಾಗಿರುತ್ತಿದ್ದರು . ಅವರ ವಿರೋಧಿಗಳೆನಿಸಿಕೊಂಡವರ ಬಗ್ಗೆಯೂ ಅವರಿಗೆ ಆಂತರ್ಯದಲ್ಲಿ ಗೌರವವಿರುತ್ತಿತ್ತು . ಯಾವುದೇ ದುರುದ್ದೇಶ ಅಥವಾ ಅಹಂ ಇಟ್ಟುಕೊಳ್ಳದೆ ಅವರೊಡನೆ ಚರ್ಚೆ ಮತ್ತು ಸಂವಾದ ನಡೆಸುತ್ತಿದ್ದರು . ಜಗತ್ತಿನಾದ್ಯಂತ ಜನತಂತ್ರ ವ್ಯವಸ್ಥೆಯಲ್ಲಿ ಕೂಡಾ ಭಿನ್ನಮತ ಮತ್ತು ಆರೋಗ್ಯಕರ ಚರ್ಚೆಗಳ ಅವಕಾಶ ಕುಗ್ಗುತ್ತಿರುವ ಈ ಸಮಯದಲ್ಲಿ ಗಾಂಧಿವಾದದ ಪರಂಪರೆಯನ್ನು ಪುನರುಜ್ಜೀವನಗೊಳಿಸುವುದು ಅತ್ಯಗತ್ಯವಾಗಿದೆ.

ಮೇಲೆ ಹೇಳಿದ ಈ ಎಲ್ಲಾ ಚಿಂತನೆಗಳು ಮತ್ತು ಕಾಳಜಿಗಳು 21 ನೇ ಶತಮಾನದಲ್ಲಿನ ಮಾನವೀಯತೆಯ ಸವಾಲುಗಳು ಮತ್ತು ಅಗತ್ಯಗಳನ್ನು ಪ್ರತಿಧ್ವನಿಸುತ್ತವೆ . ಆದ್ದರಿಂದ ಇವೆಲ್ಲವನ್ನೂ ಒಗ್ಗೂಡಿಸಿ ದೇಶ ವಿದೇಶಗಳ ಚಿಂತನೆಗಳನ್ನು ಮತ್ತು ಚಿಂತಕರನ್ನು ಸೇರಿಸಿ ಚರ್ಚೆ ಮತ್ತು ಸಂವಾದ ನಡೆಸುವುದು ಅಗತ್ಯವಾಗಿದೆ. ಈ ಅಂತರ ರಾಷ್ಟ್ರೀಯ ವಿಚಾರ ಸಂಕಿರಣವು ಈ ನಿಟ್ಟಿನಲ್ಲಿ ಪ್ರಯತ್ನಿಸಲಿದೆ .

ಈ ವಿಚಾರ ಸಂಕಿರಣವು ಮಹಾತ್ಮ ಗಾಂಧೀಜಿಯವರ ಚಿಂತನೆಗಳು ಮತ್ತು ಆಚರಣೆಗಳನ್ನು ಕೇಂದ್ರೀಕರಿಸಿದ್ದರೂ ಭಿನ್ನ ವಿಚಾರಗಳು , ದೃಷ್ಟಿಕೋನಗಳು ಮತ್ತು ಗಂಭೀರ ಚರ್ಚೆಗಳಿಗೆ ವಿಶಾಲ ವೇದಿಕೆಯನ್ನು ಕಲ್ಪಿಸಲಿದೆ. ಆದ್ದರಿಂದ ಈ ವಿಚಾರ ಸಂಕಿರಣವು ಎಲ್ಲರಿಗೂ ಅರ್ಥಪೂರ್ಣ ಮತ್ತು ಫಲದಾಯಕವಾಗಲಿದೆ ಎಂದು ನಾವು ನಂಬಿದ್ದೇವೆ .

**ಗಾಂಧಿ ಸ್ಮಾರಕ ನಿಧಿ :**

ಜನವರಿ 30 , 1948 ರಂದು ಮಹಾತ್ಮ ಗಾಂಧಿ ಹುತಾತ್ಮರಾದ ನಂತರ ರಾಷ್ಟ್ರಪಿತನ ಚಿಂತನೆ ಮತ್ತು ಆದರ್ಶಗಳನ್ನು ಚಿರಸ್ಥಾಯಿಗೊಳಿಸಲು ಭಾರತ ಸರ್ಕಾರವು ನಿರ್ಧರಿಸಿತು. ಈ ಉದ್ದೇಶ ಈಡೇರಿಕೆಗಾಗಿ ರಾಜಕೀಯೇತರವಾದ ನಾಗರೀಕ ಟ್ರಸ್ಟ್ ಸ್ಥಾಪಿಸಿ ಅದಕ್ಕೆ ಬೆಂಬಲ ನೀಡಲು ನಿರ್ಧರಿಸಿತು . ಅದರಂತೆ 1949 ರಲ್ಲಿ ಗಾಂಧಿ ಸ್ಮಾರಕ ನಿಧಿಯನ್ನು ಒಂದು ಸ್ವಾಯತ್ತ ಸಂಸ್ಥೆಯನ್ನಾಗಿ ರಚಿಸಿತು .

ಭಾರತದ ಪ್ರಥಮ ರಾಷ್ಟ್ರಪತಿ ಡಾ . ಬಾಬು ರಾಜೇಂದ್ರ ಪ್ರಸಾದ್ ಟ್ರಸ್ಟ್ ನ ಸಂಸ್ಥಾಪಕ ಅಧ್ಯಕ್ಷರಾದರು . ಪ್ರಧಾನಿ ಪಂಡಿತ್ ಜವಾಹರ್ ಲಾಲ್ ನೆಹರು ಮತ್ತು ಉಪಪ್ರಧಾನಿ ಸರ್ದಾರ್ ವಲ್ಲಭ ಬಾಯ್ ಪಟೇಲ್ ಇವರಿಬ್ಬರೂ ಉಪಾಧ್ಯಕ್ಷರಾದರು . ಮೌಲಾನಾ ಅಬ್ದುಲ್ ಕಲಾಂ ಅಜಾದ್ , ಪಂಡಿತ್ ಗೋವಿಂದ ವಲ್ಲಭ ಪಂಥ್ , ಆಚಾರ್ಯ ಕೃಪಲಾನಿ, ಜಗಜೀವನ್ ರಾಮ್ , ಜಿ ವಿ ಮಾವಲಂಕರ್ , ಜೆ ಆರ್ ಡಿ ಟಾಟಾ ಮತ್ತು ಯಶೋಧರಾ ದಾಸಪ್ಪ ಹಾಗೂ ಇನ್ನೂ ಹಲವು ಪ್ರಮುಖರು ಟ್ರಸ್ಟನಲ್ಲಿ ಇತರ ಸದಸ್ಯರಾಗಿದ್ದರು .

ಗಾಂಧಿ ಸ್ಮಾರಕ ನಿಧಿಯ ಶಾಖೆಗಳು ಭಾರತದ ಎಲ್ಲ ರಾಜ್ಯಗಳಲ್ಲಿವೆ . ಆಯಾ ರಾಜ್ಯಗಳಲ್ಲಿನ ರಾಜಧಾನಿಯಲ್ಲಿ ಇದರ ಶಾಖೆಗಳಿವೆ. ಇವು ಸ್ವತಂತ್ರವಾಗಿ ಜನತಂತ್ರಾತ್ಮಕವಾಗಿ ಆಯ್ಕೆಯಾದ ಆಡಳಿತ ಮಂಡಳಿಯಿಂದ ನಿರ್ವಹಿಸುತ್ತಿವೆ . 1948 ರಲ್ಲಿ ಸ್ಥಾಪನೆಯಾದ ಗಾಂಧಿ ಸ್ಮಾರಕ ನಿಧಿಗೆ ಈಗ 75 ವರ್ಷಗಳು ತುಂಬುತ್ತಿದೆ . ಕರ್ನಾಟಕದಲ್ಲಿ ಖ್ಯಾತ ಶಿಕ್ಷಣ ತಜ್ಞ ಡಾ ವೂಡೇ ಪಿ ಕೃಷ್ಣ ಅವರು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾಗಿದ್ದಾರೆ.



International Seminar to commemorate

**75th Anniversary of the Central Gandhi Smarak Nidhi, New Delhi**

# MAHATMA GANDHI FOR THE 21ST CENTURY

## Building A Future of Peace, Justice, Fraternity and Sustainable Development

## WHY THIS SEMINAR?

**An attempt to understand contemporary global challenges in the light of Gandhian and other humanistic philosophies and actions**

Mahatma Gandhi was the greatest votary of peace, justice and universal brotherhood in the modern history of humankind. Although he was the preeminent leader of India's struggle for freedom from British colonial rule, he was truly a Vishwa Manav, a citizen of the world. He envisioned India's national liberation as an integral part of - indeed, as a catalyst for - the efforts to create a new and better world.

He championed Truth (*Satya)* and Non-Violence *(Ahimsa)* as ethical principles of eternal and worldwide relevance. Among all the leaders of national liberation struggles in the last century, Gandhi stands apart for his unwavering commitment to the essential unity of humanity, transcending the barriers of nationality, race, religion, caste and class.

Gandhi died - he fell to the bullets of a religious extremist - nearly eight decades ago. But his thoughts and ideals, like those of other saints and social reformers belonging to other countries and cultures, are immortal.

At a time when India and the rest of the world are witnessing alarming levels of religious disharmony, he speaks to us in a voice that urges dialogue for mutual understanding, trust, respect and peaceful co-existence. At a time when the world is beset with steep inequalities both within and among nations, his concepts of *Sarvodaya (Welfare of All)* and *Antyodaya (Welfare of the Last Man in Society)* show us the path toward a more just and equitable world.

Gandhi's categorical denunciation of nuclear and other weapons of mass destruction as "sins against humanity" imparts strength to the worldwide campaign for peace and disarmament. He was one of the pioneers of Sustainable Development. His famous exhortation -***"Mother Earth has enough to satisfy everyone's need, but not everyone's greed"*** has become a mantra of the Green Movement globally. By

describing women as the embodiments of love, care and compassion, he prophesied that the future evolution of the human species would be led by women.

Gandhi conducted pathbreaking experiments in education, healthcare, nutrition, sanitation, village industries and other areas related to human welfare. Even though times have changed, the essence of these experiments holds important lessons for our world. There is a widespread misconception that he was opposed to modern science and technology. This is not true. He had profound faith, bordering on romance, in the power of scientific knowledge and technological advancements to solve the problems of humanity and aid the search for the truth behind the mysteries of the universe. ***"Everything can be turned into a science or a romance,"*** he said. His warning was directed at the unethical and exploitative use of science and technology. Since the 21st century is going to shaped by revolutionary technologies such as Artificial Intelligence (AI), Robotics, Genetics and others, there is surely a need to understand both their possibilities and perils.

There is another widespread misconception about Gandhi - that, as an advocate of ***Swadeshi (national self-reliance)***, he disfavored international cooperation. This, too, is not true. He wanted a balance between localization and globalization. ***"Interdependence (among nations) is and ought to be as much the ideal of man as (national) self-sufficiency,"*** he said.

Gandhi was a democrat to the core. While being firm in his basic convictions, he was never dogmatic. He was always open to learning from new situations and from others' points of view. He had intrinsic respect for his opponents, and conducted debates and discussions with them in a manner completely free from malice and egotism. At a time when space for dissent and healthy debate is shrinking even in democracies around the world, this Gandhian tradition needs to be revived.

It is obvious that all the above-mentioned thoughts and concerns resonate with the problems and needs of humanity in the 21st century. Therefore, we feel that there is a need to debate and discuss them by bringing together leading thought and action leaders from India and abroad. This is what the International Seminar will attempt to do.

Although the Seminar focuses on Mahatma Gandhi's philosophy and practice, it will enlarge the scope of the debates by providing a platform for diverse, even critical, viewpoints. This, we believe, is essential for making the Seminar meaningful and fruitful for all.








**ಕರ್ನಾಟಕ ಗಾಂಧಿ ಸ್ಮಾರಕ ನಿಧಿ**
ಗಾಂಧಿ ಭವನ , ಬೆಂಗಳೂರು



## ನವದೆಹಲಿಯ ಕೇಂದ್ರ ಗಾಂಧಿ ಸ್ಮಾರಕ ನಿಧಿಯ 75ನೇ ವರ್ಷದ ಸಂಸ್ಮರಣೆಗಾಗಿ ಅಂತರ ರಾಷ್ಟ್ರೀಯ ವಿಚಾರ ಸಂಕಿರಣ

# 21ನೇ ಶತಮಾನಕ್ಕೆ ಮಹಾತ್ಮ ಗಾಂಧೀಜಿ

### ಭವಿಷ್ಯದ ಶಾಂತಿ, ನ್ಯಾಯ, ಸಹೋದರತ್ವ ಮತ್ತು ಸುಸ್ಥಿರ ಅಭಿವೃದ್ಧಿಯ ನಿರ್ಮಾಣಕ್ಕಾಗಿ

**24 -25, ಆಗಸ್ಟ್ 2024**

**ಗಾಂಧಿ ಭವನ**
ಕುಮಾರಪಾರ್ಕ್ ಪೂರ್ವ, ಬೆಂಗಳೂರು -560001

ಆಗಸ್ಟ್ 24 –25, 2024 ರಂದು ನಡೆಯಲಿರುವ ಎರಡು ದಿನಗಳ ಅಂತರ ರಾಷ್ಟ್ರೀಯ ವಿಚಾರ ಸಂಕಿರಣಕ್ಕೆ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯು ನಿಮ್ಮನ್ನು ಆಹ್ವಾನಿಸುತ್ತಿದೆ. ನವದೆಹಲಿಯಲ್ಲಿ 1949ರಲ್ಲಿ ಸ್ಥಾಪಿತವಾದ ರಾಷ್ಟ್ರೀಯ ಖ್ಯಾತಿಯ ಕೇಂದ್ರ ಗಾಂಧಿ ಸ್ಮಾರಕ ನಿಧಿಯ 75 ನೇ ವರ್ಷದ ಸಂಸ್ಮರಣೆಗಾಗಿ ಈ ವಿಚಾರ ಸಂಕಿರಣವನ್ನು ಆಯೋಜಿಸಲಾಗುತ್ತಿದೆ .

# ಪುಸ್ತಕ ಪರಿಚಯ

**ರಾಷ್ಟ್ರಪಿತ ಮಹಾತ್ಮಾ ಗಾಂಧಿಯವರ ಕುರಿತಾಗಿ ಅರವಿಂದ ಚೊಕ್ಕಾಡಿಯವರು ಬರೆದಿರುವ ಪುಸ್ತಕವನ್ನು ಓದಿ ಹಂಪಿ ಕನ್ನಡ ವಿ.ವಿ.ಯ ವಿಶ್ರಾಂತ ಕುಲಪತಿಯವರಾದ ಬಿ. ಎ. ವಿವೇಕ ರೈ ಅವರು ಬರೆದಿರುವ ಟಿಪ್ಪಣಿ :**




ನಿಮ್ಮ 'ಗಾಂಧಿ – ಮೌಲ್ಯಗಳ ನಡುವಿನ ಮೌನ ' ಪುಸ್ತಕವನ್ನು ಓದಿ ಮುಗಿಸಿದೆ . 79 ಬರಹಗಳಲ್ಲಿ ಗಾಂಧಿಯವರ ಒಳಹೊಕ್ಕು ಬಂದ ಶಾಂತತೆಯ ಅನುಭವವಾಯಿತು . ಗಾಂಧೀಜಿಯವರನ್ನು ಕುರಿತು ಕನ್ನಡದಲ್ಲಿ ಮತ್ತು ಇಂಗ್ಲಿಷ್ ನಲ್ಲಿ ಸಾಕಷ್ಟು ಪುಸ್ತಕಗಳನ್ನು ಓದಿದ್ದೆ .ಕನ್ನಡದಲ್ಲಿ ಗಾಂಧಿ ಬಗ್ಗೆ ಬಂದ ಕವನಗಳ ಸಹಿತ 'ಗಾಂಧಿ ಕಥನ ' ದೊಂದಿಗೆ ನೀವು ಉಲ್ಲೇಖಿಸಿದ ಕೆಲವು ಪುಸ್ತಕಗಳನ್ನು ಓದಿದ್ದೆ. ಅವೆಲ್ಲವೂ ಬಹಳ ಮಹತ್ವದವೇ .

ಆದರೆ ನಿಮ್ಮ ಕೃತಿ ಜನಸಾಮಾನ್ಯರಿಂದ ಹಿಡಿದು ಎಲ್ಲ ವರ್ಗದವರನ್ನು ಸರಳವಾಗಿ ನೇರವಾಗಿ ತಲುಪುವ ಆತ್ಮೀಯ ಬರವಣಿಗೆ . ಪ್ರತಿಯೊಂದು ಬರಹಕ್ಕೆ ನೀವು ಕೊಡುವ

ಶೀರ್ಷಿಕೆಯೇ ಆಕರ್ಷಕ ಮತ್ತು ಬರಹದ ಸಾರವಾಕ್ಯ . ಪ್ರತಿಯೊಂದು ಬರಹದ ಮುಖ್ಯಭಾಗದಲ್ಲಿ ಗಾಂಧಿಯವರ ಬದುಕಿನ ನಿರ್ದಿಷ್ಟ ಘಟನೆ /ಸನ್ನಿವೇಶಗಳನ್ನು ಕೊಟ್ಟು , ಬಳಿಕ ಅದರ ಮೂಲಕ ಗಾಂಧಿ ತತ್ವ ಅಂದರೆ ಏನು ಎನ್ನುವುದನ್ನು ಸರಳವಾಗಿ ಸಾರವತ್ತಾಗಿ ತಿಳಿಸಿದ್ದೀರಿ .ಬಳಿಕ ಇಂತಹ ಗಾಂಧಿ ತತ್ವದ ಇಂದಿನ ಪ್ರಸ್ತುತತೆಯ ಬಗ್ಗೆ ಟಿಪ್ಪಣಿ ಬರೆದಿದ್ದೀರಿ . ಪ್ರಾಥಮಿಕ ಶಾಲೆಯ ಮಕ್ಕಳಿಂದ ತೊಡಗಿ ದೊಡ್ಡವರ ವರೆಗೆ ಸಿದ್ಧಾಂತಗಳ ಭಾರವಿಲ್ಲದೆ , ಸಹಜ ಶೈಲಿಯಲ್ಲಿ ನಿರೂಪಣೆ ಇರುವ ಇಲ್ಲಿನ ಬರಹಗಳು ನಿಜವಾದ ಗಾಂಧಿಮಾರ್ಗವನ್ನು ತೋರಿಸುತ್ತವೆ .

ಪುಸ್ತಕದ ಶೀರ್ಷಿಕೆಗೆ ಅನ್ವರ್ಥವಾಗಿ ಇಲ್ಲಿನ ಬರಹಗಳಲ್ಲಿ ಮೌಲ್ಯಗಳು ಮೌನಗಳ ನಡುವೆ ಬೆಳಕು ಕಂಡು ದಾರಿದೀಪಗಳಾಗುತ್ತವೆ. ಗಾಂಧಿಯವರು ಮೌನಕ್ಕೆ ಕೊಡುತ್ತಿದ್ದ ಮಹತ್ವಕ್ಕೆ ಇಲ್ಲಿನ ಬರಹಗಳಲ್ಲಿ ನಿದರ್ಶನಗಳು ದೊರೆಯುತ್ತವೆ. (ಮೌನ ಶಕ್ತಿ ). ಇವತ್ತು ಆಧುನಿಕ ಸಮಾಜ , ಬೌದ್ಧಿಕ ಎಂದು ಕರೆದುಕೊಳ್ಳುವ ಸಮಾಜದ ಸಹಿತ , ಎದುರಿಸುತ್ತಿರುವ ಬಿಕ್ಕಟ್ಟುಗಳಿಗೆ / ದ್ವಂದ್ವಗಳಿಗೆ ಗಾಂಧಿ ಬದುಕಿನ ಬಗೆಗಿನ ಇಲ್ಲಿನ ಬರಹಗಳಲ್ಲಿ ಪರಿಹಾರವಿದೆ .

ನಾನು ನಿಮ್ಮ ಈ ಗ್ರಂಥವನ್ನು ಓದಿ ಉತ್ಸಾಹದಿಂದ ಬರೆಯಲು ಕಾರಣ –ನನ್ನ ಅಪ್ಪ ಅಗ್ರಾಳ ಪುರಂದರ ರೈ ಅವರು ( 1916–2001) ದಕ್ಷಿಣ ಕನ್ನಡ ಜಿಲ್ಲೆಯ ಹಳ್ಳಿಯಲ್ಲಿ ಮಧ್ಯಮ ದರ್ಜೆಯ ಕೃಷಿಕರಾಗಿದ್ದು , ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿ , ಗಾಂಧಿವಾದಿಯಾಗಿ , ಸರಳವಾದ ಖಾದಿ ಪಂಚೆ ಜುಬ್ಬಾದ ಸಹಿತ ತಮ್ಮ ಬದುಕಿನ ಕೊನೆಯ ವರೆಗೂ ಗಾಂಧಿ ತತ್ವಗಳನ್ನು ಎಲ್ಲರೀತಿಯಲ್ಲಿ ಪಾಲಿಸಿಕೊಂಡು ಬಂದವರು .ಶಿವರಾಮ ಕಾರಂತರ ಮಕ್ಕಳ ಕೂಟದ ಸದಸ್ಯರಾಗಿ ಸಾಹಿತ್ಯದ ಓದು ಬರವಣಿಗೆ ಮಾಡಿಕೊಂಡು ಬಂದವರು. ನಿಮ್ಮ ಈ ಗ್ರಂಥದ ಬಹುತೇಕ ಬರಹಗಳ ಮೌಲ್ಯಗಳನ್ನು ಅವರು ನಿಷ್ಠೆಯಿಂದ ಪಾಲಿಸಿಕೊಂಡು ಬಂದದ್ದನ್ನು ನಾನು ಕಂಡಿದ್ದೇನೆ .ನಮಗೆ ಮಕ್ಕಳಿಗೆ ಈ ಎಲ್ಲಾ ಮೌಲ್ಯಗಳನ್ನು ಅವರು ನಿರಂತರವಾಗಿ ಬೋಧಿಸುತ್ತಿದ್ದರು .ಅವರ ಬದುಕಿನ ಸಣ್ಣ ಸಣ್ಣ ಕ್ಷಣಗಳು ನಮಗೆ ಗಾಂಧಿಯನ್ನು ಅಗೋಚರವಾಗಿ ದರ್ಶಿಸಿದ್ದುವು. ನಿಮ್ಮ ' ಗಾಂಧಿ' ಪುಸ್ತಕದ ಮೌಲ್ಯಚಿತ್ರಗಳು ಆ ನೆನಪುಗಳಿಗೆ ಜೀವ ಕೊಟ್ಟುವು.

ನಿಮ್ಮ ಆಪ್ತ ಬರವಣಿಗೆಗಾಗಿ ಅಭಿನಂದನೆಗಳು, ನಿಮ್ಮ ಮೌಲಿಕ ಪುಸ್ತಕದ ಕೊಡುಗೆಗಾಗಿ ಕೃತಜ್ಞತೆಗಳು

(ಪುಸ್ತಕಕ್ಕಾಗಿ ಸಂಪರ್ಕಿಸಿ : ರೂಪ ಪ್ರಕಾಶನ – 9342274331)

## ಪುಸ್ತಕ ಪರಿಚಯ




**ಎ ನಾರಾಯಣ ಮತ್ತು ಮನೋಜಕುಮಾರ್ ಗುದ್ದಿ ಅವರು ಅನುವಾದಿಸಿರುವ ಧೀರೇಂದ್ರ ಕೆ ಝಾ ಅವರ 'ಗಾಂಧೀಜಿಯ ಹಂತಕ' ಪುಸ್ತಕದ ಕುರಿತು ರಾಜಾರಾಂ ತಲ್ಲೂರು ಅವರ ಟಿಪ್ಪಣಿ...**

**ಅಕಾಲದಲ್ಲೊಂದು ಸಕಾಲಿಕ ಪುಸ್ತಕ .**

ಪ್ರತಿದಿನ ಟೆಲಿವಿಷನ್ ಚಾನೆಲ್‌ಗಳಲ್ಲಿ, ಪತ್ರಿಕೆಗಳಲ್ಲಿ ಕ್ರೈಮ್ ಸುದ್ದಿಗಳನ್ನು ಕಂಡು, ಕೇಳಿ ಮರಗಟ್ಟಿ ಹೋಗಿರುವ ಸಮಾಜವೊಂದರಲ್ಲಿ ಏಕಾಏಕಿ, 70–80 ವರ್ಷ ಹಿಂದಿನ ಗಾಂಧಿ ಹತ್ಯೆಯ ಸಂಚು–ಹತ್ಯೆ–ವಿಚಾರಣೆಯ ಅವಧಿಗಳ ಕುರಿತು ವಿವರಗಳನ್ನು ನೀಡಲು ಹೊರಡುವಾಗ ಸ್ವಲ್ಪ ಎಚ್ಚರ ಬೇಕಾಗುತ್ತದೆ. 2021ರಲ್ಲಿ ಪ್ರಕಟಗೊಂಡ "Gandhi's Assassin: The making of Nathuram Godse and His idea of India" ಪುಸ್ತಕವನ್ನು ಎ.ನಾರಾಯಣ ಮತ್ತು ಮನೋಜಕುಮಾರ್ ಗುದ್ದಿ ಕನ್ನಡಕ್ಕೆ ಅನುವಾದಿಸಿದ್ದಾರೆ.

ವಿಶೇಷವಾಗಿ, ಪ್ರತಿಗಾಮಿ ಯೋಚನೆಗಳು ನಡುಮನೆಯಲ್ಲಿ ಜಾಗ ಪಡೆಯುತ್ತಿರುವ ಈ ಅಕಾಲದಲ್ಲಿ ಇಂತಹ ಪುಸ್ತಕಗಳು ಸಡಿಲವಾಗಿದ್ದರೆ, ಉನ್ಮಾದಿಗಳಿಗೆ ಕ್ರೈಂ ಥ್ರಿಲ್ಲರ್‌ಗಳಾಗಿಬಿಡುವ ಅಪಾಯವೇ ಹೆಚ್ಚು. ನಾನು ಚರಿತ್ರೆಯ ಈ ವಿವರಗಳನ್ನೆಲ್ಲ ಹೆಚ್ಚು ಹಚ್ಚಿಕೊಂಡು ಓದಲು ಹೋದವನಲ್ಲ. ಇಂತಹ ಬೇರೆ ಪ್ರಕಟಣೆಗಳ ಬಗ್ಗೆ ನನಗೆ ಹೆಚ್ಚು ಗೊತ್ತಿಲ್ಲ. ಹಾಗಾಗಿ ಕನ್ನಡದಲ್ಲಿ ಈ ಪುಸ್ತಕದ ಓದಿನ ಉದ್ದಕ್ಕೂ ನನಗೆ ದಟ್ಟವಾಗಿ ಅನ್ನಿಸುತ್ತಿದ್ದುದು ಏನೆಂದರೆ, ಇಂತಹ ಹಸಿ ಹಸಿ ವಿವರಗಳು ಮತ್ತಷ್ಟು ವಿಕ್ಷಿಪ್ತತೆಗೆ ಪ್ರಚೋದಿಸುವುದಿಲ್ಲವೆ? ಎಂಬುದು. ಆದರೆ ಓದುತ್ತಾ ಹೋದಂತೆ, ಈ ಪುಸ್ತಕ ಆ ಸವಾಲನ್ನು ಬಹಳ ಸಮರ್ಥವಾಗಿ ಸ್ವೀಕರಿಸಿದೆ ಎಂಬುದು ಖಚಿತವಾಗುತ್ತಾ ಹೋಯಿತು. ಪ್ರತೀ ವಾಕ್ಯ–ಪಾರಾಗ್ರಾಫ್‌ಗಳ ಜೊತೆ ಬರುವ ಅಡಿಟಿಪ್ಪಣಿಗಳು, ಮೂಲ ಹೇಳಿಕೆಗಳು ಮತ್ತು ಉದ್ವೇಗರಹಿತ ಭಾಷೆ – ಪುಸ್ತಕದ ಉದ್ದಕ್ಕೂ ಬರುವ ಅಪರಾಧ ಪ್ರಚೋದಕ ಸಂಗತಿಗಳಿಗೆ ಅಗತ್ಯ ಏಲಿನೇಷನ್ ಎಫೆಕ್ಟ್‌ಗಳನ್ನು ಒದಗಿಸುತ್ತಾ ಬರುತ್ತವೆ.

ಮೂಲ ಇಂಗ್ಲಿಷ್ ಪುಸ್ತಕ ನಾನು ಓದಿಲ್ಲ, ಆದರೆ ಈ ಏಲಿನೇಷನ್ ಎಫೆಕ್ಟ್ ಕಾರಣದಿಂದಾಗಿ ಕನ್ನಡ ಅನುವಾದ ನನಗೆ ಇಷ್ಟವಾಯಿತು. ಮೂಲದಲ್ಲೂ ಇದೇ ಧ್ವನಿ ಇದ್ದದ್ದು ಹೌದಾಗಿದ್ದರೆ, ಈ ಅನುವಾದವು ಸಮರ್ಥ ಅನುವಾದ ಎಂಬುದಕ್ಕೆ ಅದೇ ಸಾಕ್ಷಿ. ಇದನ್ನು ಇಬ್ಬರು ಅನುವಾದಕರೂ ಹೇಗೆ "ಶೈಲಿವಾರು" ನಿರ್ವಹಿಸಿದರು ಎಂಬ ಕುರಿತು (ಅನುವಾದ ಪ್ರಕ್ರಿಯೆಯ ಕುರಿತು) ಕುತೂಹಲ ಇದೆ.

ಗಾಂಧಿ ಹತ್ಯೆ – ಆ ಕಾಲದ ರಾಜಕೀಯದಲ್ಲಿ ಸಾವರ್ಕರ್ ಪಾತ್ರ – ಆರೆಸ್ಸೆಸ್ ಮತ್ತು ಹಿಂದೂ ಮಹಾಸಭಾ ಪಾತ್ರ – ಗಾಂಧಿ ಹತ್ಯೆ ಸಂಚಿನ ರೂವಾರಿಗಳು – ಹತ್ಯೆ – ವಿಚಾರಣೆ ಇವೆಲ್ಲ ಒಂದು ಆರೋಗ್ಯಕರ ಚೌಕಟ್ಟಿನಲ್ಲಿ ಕನ್ನಡದಲ್ಲಿ ಮರು ಓದಿಗೆ ಸಿಗುವುದು ಅಗತ್ಯ ಇತ್ತು. ಅದನ್ನು ಈ ಪುಸ್ತಕ ಸಮರ್ಥವಾಗಿ ಒದಗಿಸಿಕೊಟ್ಟಿದೆ. ಒಂದು ಮಹತ್ವದ–ಸಕಾಲಿಕ ಪುಸ್ತಕಕ್ಕಾಗಿ ಅಹರ್ನಿಶಿಗೆ ಕೃತಜ್ಞತೆಗಳು.

– ರಾಜಾರಾಂ ತಲ್ಲೂರು

■

**ಗಾಂಧೀಜಿಯ ಹಂತಕ ಪುಸ್ತಕದ ಬಗ್ಗೆ ಇನ್ನೊಂದು ಟಿಪ್ಪಣಿ ..**

ಖಂಡಿತಾ ಈ ಪುಸ್ತಕ ಭಾರತದ ಎಲ್ಲಾ ಭಾಷೆಗಳಿಗೂ ಅನುವಾದ ಆಗಬೇಕು. ಮುಖ್ಯವಾಗಿ ಮರಾಠಿಗೆ! ಆಗಿದ್ದರೆ ಫೈನ್...

ರನ್ನನ ಸಿಂಹಾವಲೋಕನ ಕ್ರಮದಂತೆ ನಿರೂಪಣೆಗೊಳ್ಳುವ ಇದು ಪ್ರಾರಂಭದಲ್ಲಿ ಅಪರಾಧದ ನಿರ್ಧಾರವನ್ನು ಮಂಡಿಸಿ ಮಹಾ ಅಪಚಾರದ ನಿದರ್ಶನಗಳನ್ನು ಬಿಚ್ಚಿಡುತ್ತ ಹೋಗುತ್ತದೆ. ಮನುಷ್ಯಲೋಕ ಯಾವಾಗಲೂ ಒಳ್ಳೇತನವನ್ನು ಮಾಡಿಸಿದವರಿಗೆ; ಕೆಟ್ಟತನವನ್ನು ಮಾಡಿದವರಿಗೇ ಕಟ್ಟಿರುವುದು ಇತಿಹಾಸದ ಶಾಸನ ಮತ್ತು ಅದನ್ನು ಬರಿಸಿದ ಸಾಮ್ರಾಜ್ಯಗಳಲ್ಲಿ ಸಿಗುತ್ತವೆ (ಉದಾಹರಣೆ ಅಗತ್ಯವಿಲ್ಲ ಅನಿಸುತ್ತದೆ) ಧೀರೇಂದ್ರ ಕೆ ಝಾ ಅವರ ತಮ್ಮ ಶಿಸ್ತುಬದ್ಧ ಅಧ್ಯಯನದ ಮೂಲಕ ಭೂತ ವರ್ತಮಾನವನ್ನು ಕಟಕಟೆಯಲ್ಲಿ ನಿಲ್ಲಿಸುವಂತೆ ಮಾಡಿದ್ದಾರೆ. ಇಡೀ ಪುಸ್ತಕವು ಭೋಳೇತನದ ಭ್ರಮೆಗಳನ್ನು ವೈಯಕ್ತಿಕ ಹಿತಾಸಕ್ತಿ ಬಳಸಿಕೊಳ್ಳುವ ಕ್ರಮಗಳನ್ನು ವಿವರಿಸುತ್ತದೆ. ನನಗೆ ಹೆಚ್ಚು ಕಾಡಿದ್ದು ಮನೋರಮೆ ಮತ್ತು ಸೇವಂತಿ. (ಸೇವಂತಿ ಕೊನೆಗೆ ತನ್ನ ತಾಯಿಯ ವೇಶ್ಯಾವಾಟಿಕೆ ಮುಂದುವರಿಸಿದಳು, ಆದರೆ ಮನೋರಮೆ ಚರಿತ್ರೆಯಲ್ಲಿ ಏನಾದಳು? ಈಕೆಯ ಸಂಬಂಧಿಕಳೊಬ್ಬಳು ಆಡುವ ಮಾತು 'ನಮ್ಮ ಪಾಲಿಗೆ, ಅವಳು ಒಬ್ಬ ಅಪರಾಧಿ ಜೊತೆ ಸಂಬಂಧ ಇಟ್ಟುಕೊಂಡಿದ್ದದ್ದು ಮಾತ್ರ ಪಾಪವಾಗಿರಲಿಲ್ಲ, ಜೊತೆಗೆ ಆ ಅಪರಾಧಿ ಕ್ರಿಸ್ತನಂತಿದ್ದ ವ್ಯಕ್ತಿಯೊಬ್ಬನ ಹತ್ಯೆ ಮಾಡುವ ಸಂಚಿನಲ್ಲಿ ಭಾಗಿದಾರನಾಗಿದ್ದ ಎಂಬುದೂ ಕೂಡ' ಪು.ಸಂ.254) ಇವರಿಬ್ಬರ ಜೊತೆಗೆ ಒಂದಷ್ಟಾದರೂ ಒಡನಾಟವಿದ್ದ ಆಪ್ಟೆ ಮತ್ತು ಪಹ್ವಾ ಗಾಂಧಿಯ ಸನಿಹಕ್ಕೆ ಹೋದರೂ ಸ್ವತಃ ಬಂದೂಕು ಹಿಡಿದು ಕೊಲ್ಲವಷ್ಟರಮಟ್ಟಿಗೆ ಕೈ ಹಾಕಲಿಲ್ಲ. ಬಹುಶಃ ಅವರಿಗೆ ಮನೋರಮೆಯ ಪ್ರೀತಿ ಆಪ್ಟೆಗೆ ಮತ್ತು ಸೇವಂತಿಯ ಪ್ರೀತಿ ಪಹ್ವಾನಿಗೆ ಸಿಕ್ಕಿತ್ತು. ಇದಕ್ಕೆ ನಿರೂಪಕರು ಹೇಳಿವಂತೆ 'ಗಾಂಧಿಯನ್ನು ದ್ವೇಷಿಸುವುದೊಂದೇ ಆತನ ಜೀವನದ ಮುಖ್ಯ ಗುರಿಯಾಗಿರಲಿಲ್ಲ. ಸೇವಂತಿ ಆತನನ್ನು ಸಾಕಷ್ಟು ತಿದ್ದಿದ್ದರಿಂದ ವ್ಯಕ್ತಿತ್ವದಲ್ಲಿ ಬದಲಾವಣೆ ಕಾಣಿಸಿಕೊಂಡಿತ್ತು'(ಪು.ಸಂ. 211) ಮುಖ್ಯವಾಗಿ ಗೋಡ್ಸೆನಿಗೆ ಸಿಕ್ಕ ಗುರು

ಮತ್ತು ಪಹ್ವಾನಿಗೆ ಸಿಕ್ಕ ಪ್ರೊಫೆಸರ್. ಜೈನ್‌ನಂಥ ಗುರು ತಾವು ತಮ್ಮ ಶಿಷ್ಯಂದಿರಿಗೆ ಎಂಥಾ ಸಲಹೆಗಳನ್ನು ನೀಡಿದ್ದರು ಎನ್ನುವುದನ್ನು ಗುರುಶಿಷ್ಯಂದಿರ ವ್ಯಕ್ತಿತ್ವಗಳಲ್ಲಿ ಮೂರು ಜನರದ್ದು ಪ್ರತ್ಯಕ್ಷವಾಗಿ ಇನ್ನೊಬ್ಬರದು ಪರೋಕ್ಷವಾಗಿ ಈ ಕೃತಿ ಹೇಳುತ್ತದೆ. ಈ ಸಂದರ್ಭದಲ್ಲಿ ವಿಲ್ಸನ್ ಕಟೀಲ್ ಅವರ 'ಆ ಸರ್ವಾಧಿಕಾರಿ' ಪದ್ಯದ ಸಾಲುಗಳು ತಕ್ಷಣಕ್ಕೆ ನೆನಪಾದವು. ಒಂದೆರಡು ಸ್ಟ್ಯಾಂಜಾಗಳನ್ನು ಇಲ್ಲಿ ಪ್ರಸ್ತಾಪಿಸಲೇಬೇಕನಿಸುತ್ತದೆ.

ಆ ಸರ್ವಾಧಿಕಾರಿ...

ಅರ್ಥರ್ಬರ್ಥ ಪ್ರೀತಿಯನ್ನಾದರೂ ಮಾಡಬೇಕಿತ್ತು.

ಮಾತಿಗೆ ಮಾತು ಬೆಳದು ನೆತ್ತಿಗೇರಿದ ಸಿಟ್ಟು ಒಂದು ಮುತ್ತಿಗೆ ಇಳಿದುಹೋಗುವಾಗಲಾದರೂ.. ಆತನಿಗೆ ಅರಿವಾಗುತ್ತಿತ್ತು ಎಲ್ಲವನ್ನೂ ಆಯುಧಗಳಿಂದ ಜಯಿಸಲಾಗದು.

ಆ ಸರ್ವಾಧಿಕಾರಿ...

ವೇಶ್ಯೆಯ ಸಂಗವನ್ನಾದರೂ ಮಾಡಬೇಕಿತ್ತು.

ಬಟ್ಟೆಬರೆಯ ಹಂಗಿಲ್ಲದೇ ಬೆತ್ತಲೆ ಬಾಹುಗಳ ಬಂಧನದಲ್ಲಿ ಮಂಚವೇ ತೊಟ್ಟಿಲಂತೆ ತೂಗುವಾಗಲಾದರೂ..ಆತನಿಗೆ ಅರಿವಾಗುತ್ತಿತ್ತು ಸಿಂಹಾಸನದ ವೇಷಭೂಷಣ, ನಾಟಕೀಯತೆ.

ಇದ್ಯಾವುದೂ ದಕ್ಕಿಸಿಕೊಳ್ಳದ ಗೋಡ್ಸೆಯಂಥವರು ತನ್ನ ಹಿಂದೆ ಯಾರೋ ಇದ್ದಾರೆ ಮತ್ತವರು ತನ್ನ ಬೆಂಬಲಕ್ಕೆ ನಿಲ್ಲುತ್ತಾರೆಂದು ದ್ವೇಷದ ಮೂಲಕವೇ ದೇಶಕಟ್ಟುವ ಭ್ರಮೆ ಒಳಗೆ ತೇಲಾಡಿದ. ಕುಣಿತನಕ ಬಂದವರ್‌ಯಾರೂ ಕುಣಿಕೆಗೆ ಕೊರಳೊಡ್ಡುವುದಿಲ್ಲವೆನ್ನುವುದು ಅವನಿಗೆ ಗೊತ್ತಾಗುವ ಮುಂಚೆ ಎಲ್ಲವೂ ಮುಗಿದಿತ್ತು. ಹುತಾತ್ಮನೆಂದು ಬಿಂಬಿಸಿಕೊಳ್ಳಲು ಹೋದನಾದರೂ ಆ ಮೂಲಕ ಗಾಂಧಿ ವರ್ಚಸ್ಸಿನಲ್ಲೆ ಹೆಚ್ಚುಗಾರಿಕೆ ಇತ್ತೆನ್ನುವುದು ಆತನ ಸೈಕಾಲಜಿ ಹೇಳುತ್ತಿತ್ತು. ನಮ್ಮ ಹಳ್ಳಿಗಳಲ್ಲಿ ಯಾವುದಾದರೂ ಘಟನೆ ಸಂಭವಿಸಿ ಸಾವುಗಳಾದರೆ, ಸಾವಿನ ಸುತ್ತ ಇದ್ದವರು 'ನಿನ್ನೆ ನನ್ನ ಬಾಯಾಗ ಆಡಿಸಿತ್ತೇ ಯವ್ವಾ' ಎಂದು ಅಳುತ್ತಾರೆ. ಪುಸ್ತಕದ ಕೊನೆ ಕೊನೆಗೆ ಉಪವಾಸದಿಂದ ವಿಪರೀತ ಕೆಮ್ಮು ಅಂಟಿಸಿಕೊಂಡಿದ್ದ ಗಾಂಧೀಜಿ ತಾಳೆಬೆಲ್ಲ, ಲವಂಗದಿಂದ ತಯಾರಿಸಿದ ಔಷಧಿ ತೆಗೆದುಕೊಳ್ಳುತ್ತಿದ್ದರು. ಅದು ಖಾಲಿ ಆಗಿದ್ದಕ್ಕಾಗಿ ಮೊಮ್ಮಗಳಾದ 'ಮನು' ಬೆಳಗಿನ ವಾಯುವಿಹಾರಕ್ಕೆ ಹೋಗುವುದನ್ನು ಬಿಟ್ಟು ತಯಾರಿಕೆಯಲ್ಲಿ ತೊಡಗಿದ್ದನ್ನು ನೋಡಿದ ಗಾಂಧೀಜಿ 'ಯಾರಿಗೆ ಗೊತ್ತು ರಾತ್ರಿಯ ವೇಳೆಗೆ ಏನಾಗುತ್ತದೆ ಎಂದು... ನಾನು ಜೀವಂತವಾಗಿ ಇರುತೇನಾ ಎಂಬುದು ಗೊತ್ತಿಲ್ಲ. ಒಂದು ವೇಳೆ ರಾತ್ರಿ ಹೊತ್ತಿಗೆ ಜೀವಂತವಾಗಿದ್ದರೆ ಆಗ ನೀನು ಔಷಧಿ ತಯಾರಿಸಬಹುದು'(ಪು.ಸಂ.233) ಎಂದು ಅವರ ಬಾಯಲ್ಲಿ ತಮ್ಮ ಸಾವಿನ ಕುರಿತು ಆಡಿಸಿತ್ತು ಅನಿಸುತ್ತದೆ. ನಮ್ಮ ಮುತ್ತ್ಯಾನ ಕೈಕಾಲು ನಿಂತಾಗ ಅವನನ್ನು ಜಳಕ ಮಾಡಿಸಿ ಎತ್ತಿ ತಂದು ಹೊರಸಿಗೆ ಮಲಗಿಸುತ್ತಿದ್ದ ನನಗೆ, ಮೊಮ್ಮಕ್ಕಳ ಜೊತೆಗಿನ ಗಾಂಧೀಜಿಯ ಆ ದಿನಗಳು ನನ್ನ ತುಂಬಾ ಭಾವುಕಗೊಳಿಸುತ್ತಿವೆ.

'ದುರಾಸೆ ಇಲ್ಲದವರು ಧೈರ್ಯಶಾಲಿಯಾಗಿರುತ್ತಾರಂತೆ' ಗಾಂಧೀಜಿ ವಿಷಯದಲ್ಲಿ ಇದು ಸತ್ಯವೇ. ಪಹ್ವಾ 'ಗನ್ ಕಾಟನ್' ಸ್ಫೋಟಿಸಿದಾಗ ಆ ಶಬ್ದಕ್ಕೆ ಅಲ್ಲಿಯ ಜನರು ಭಯಭೀತರಾದಾಗ ಗಾಂಧೀಜಿ  ಹೇಳುವ ಮಾತು 'ಏನೂ ಆಗದೇ ಇದ್ದುದಕ್ಕೇ ಇಷ್ಟೊಂದು ಗಾಬರಿಯಾದ ನೀವು ಒಂದು ವೇಳೆ ನಿಜವಾಗಿಯೂ ಆದರೆ ಏನು ಮಾಡುತ್ತಿದ್ದಿರಿ'(ಪು.ಸಂ.219) ಎನ್ನುವುದು ಅವರ ಗಟ್ಟಿತನವನ್ನೇ ಹೇಳುತ್ತದೆ. ಆದರೆ ಅವರನ್ನು




ಕೊಲ್ಲಿಸುವ ಮತ್ತು ಕೊಲ್ಲುವ ಮನುಸಗಳ ಅಂಜುಬರಕಿತನವನ್ನು ಇಡೀ ಪುಸ್ತಕದಲ್ಲಿ ಅಲ್ಲಲ್ಲಿ ಸಾಕಷ್ಟು ಬರುತ್ತದೆ. ಗೋಡ್ಸೆಯಂಥವರಲ್ಲಿ ಸಮಾಜವನ್ನು ಬರೀ ನೋಡುವಿಕೆ ಮಾತ್ರ ಇತ್ತು. ಆದರೆ ಗಾಂಧೀಜಿಯಂಥವರಲ್ಲಿ ಕಾಣುವಿಕೆ ಇತ್ತು. ನೋಡುವಿಕೆಗೂ ಕಾಣುವಿಕೆಗೂ ಅಜಗಜಾಂತರ. ನೋಡುವಿಕೆಯಲ್ಲಿ ಅಂತರವಿರುತ್ತದೆ. ಕಾಣುವಿಕೆಯಲ್ಲಿ ಅಂತಃಕರಣವಿರುತ್ತದೆ. ಹಾಗಾಗಿಯೇ ಅಕ್ಕ 'ಚಿಲಿಪಿಲಿಯೆಂದೋದುವ ಹಕ್ಕಿಗಳಿರಾ ನೀವು ಕಾಣಿರೆ ನೀವು ಕಾಣಿರೆ' ಎಂದು. ಬಸವಣ್ಣ 'ಕಂಡಾಗಳ್ ಅಶ್ರುಜಲಂಗಳ್ ಸುರಿಯದಿದ್ದಡೆ' ಎಂದು. ಅಲ್ಲಮ 'ಹಿಂದಣದ ಹೆಜ್ಜೆ ನೋಡಿ ಕಂಡಲ್ಲದೆ' ಎಂದು ಹೇಳುತ್ತಾರೆ. ಗಾಂಧಿಯಲ್ಲಿ ಅಕ್ಕ,ಅಲ್ಲಮ, ಬಸವಣ್ಣ ಎಲ್ಲರೂ ಇದ್ದರು.

ಕನ್ನಡ ಸಾಹಿತ್ಯದಲ್ಲಿ ಇಳಿಹೊತ್ತಿನ ಸಾವುಗಳು ಆಗಾಗ ನನಗೆ ತುಂಬಾ ಡಿಸ್ಟರ್ಬ್ ಮಾಡುತ್ತಿರುತ್ತವೆ. ದುರ್‌ಯೋಧನನ ಇಳಿಹೊತ್ತಿನ ಸಾವಿನ ಕುರಿತು ರನ್ನ ಶ್ಲೇಷಲಂಕಾರದಲ್ಲಿ ಬಳಸುವ ಭಾವನಾತ್ಮಕ ಪರಿ...

"ಕುರುಕುಲಾರ್ಕನುಮರ್ಕನುಮಸ್ತಮೆಯ್ದಿದರ್' ಎಂದು.

ಕರ್ಣ ಸಾಯುವಾಗ:

ಕುಮಾರವ್ಯಾಸ ಬಳಸುವ ಭಾವನಾತ್ಮಕ ಪರಿ...

"ದ್ಯುಮಣಿ ಕರ್ಣದ್ಯುಮಣಿಸಹಿತಸ್ತಮಿಸೆ ಕಮಲಿನಿ ಕೌರವನ ಮುಖ ಕಮಲ ಬಾಡಿತು" ಇಲ್ಲಿ ಗಾಂಧಿಯ ಸಾವೂ ಕೂಡ ಇಳಿಹೊತ್ತಿನಲ್ಲೇ ಆಗುವಂಥದ್ದು. ಈ ಸಾವಿಗೆ ಸಾಹಿತ್ಯದ ವಿದ್ಯಾರ್ಥಿಯಾದ ನಾನು ಏನು ಹೇಳುವುದು?? ಹೇಗೆ ಹೇಳುವುದು???

– ಸಂಗನಗೌಡ ಹಿರೇಗೌಡ

ಆಸಕ್ತರು ಪುಸ್ತಕ ಕೊಳ್ಳಲು ಕೆಳಗಿನ ಲಿಂಕ್ ಕ್ಲಿಕ್ಕಿಸಬಹುದು...

https://prajodaya.myinstamojo.com/product/5281832/-910d9



ಗಾಂಧಿ ಸ್ಮಾರಕ ನಿಧಿ ರಾಷ್ಟ್ರ ಮಟ್ಟದಲ್ಲಿ ಸ್ಥಾಪನೆಯಾಗಿ 75 ವರ್ಷಗಳು ತುಂಬಿವೆ . ಇದರ ಸಂಸ್ಮರಣೆಗಾಗಿ ಬೆಂಗಳೂರಿನಲ್ಲಿ ಆಗಸ್ಟ್ ತಿಂಗಳಿನಲ್ಲಿ ಏರ್ಪಡಿಸುತ್ತಿರುವ "ಗಾಂಧಿ ಸ್ಮಾರಕ ನಿಧಿ–75 – 21 ನೇ ಶತಮಾನಕ್ಕಾಗಿ ಮಹಾತ್ಮ ಗಾಂಧೀಜಿ" ಶೀರ್ಷಿಕೆಯ ಅಂತರ ರಾಷ್ಟ್ರೀಯ ವಿಚಾರ ಸಂಕಿರಣ ಉದ್ಘಾಟನೆಗಾಗಿ ಮಾನ್ಯ ಮುಖ್ಯ ಮಂತ್ರಿಗಳನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಕಾರ್ಯಾಧ್ಯಕ್ಷರಾದ ಎನ್ ಆರ್ ವಿಶುಕುಮಾರ್ , ಗೌರವ ಕಾರ್ಯದರ್ಶಿ ಎಂ ಸಿ ನರೇಂದ್ರ, ಕಾರ್ಯಕ್ರಮಗಳ ನಿರ್ದೇಶಕರಾದ ಪ್ರೊ ಜಿ ಬಿ ಶಿವರಾಜ್ ಭೇಟಿ ಮಾಡಿ ಆಹ್ವಾನಿಸಿದರು.




ಅತ್ಯುತ್ತಮ ಸಾಮಾಜಿಕ ಸೇವೆಗಾಗಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಂಸ್ಥೆಗೆ 2024 ರ ನಾಡಪ್ರಭು ಕೆಂಪೇಗೌಡರ ಅಂತರ ರಾಷ್ಟ್ರೀಯ ಪ್ರಶಸ್ತಿ ಸಂದಿದೆ. ಮಾನ್ಯ ಮುಖ್ಯಮಂತ್ರಿಗಳು ಪ್ರದಾನ ಮಾಡಿದ ಈ ಪ್ರಶಸ್ತಿ ಪ್ರಧಾನ ಸಮಾರಂಭದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ವೂಡೇ ಪಿ ಕೃಷ್ಣ ಮತ್ತು ಕಾರ್ಯಾಧ್ಯಕ್ಷರಾದ ಎನ್ ಆರ್ ವಿಶುಕುಮಾರ್ ಪ್ರಶಸ್ತಿ ಸ್ವೀಕರಿಸಿದರು .



ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಮಾಜಿ ಸದಸ್ಯರಾದ ಡಾ. ಬಿ ಆರ್ ಮಮತಾ, ಐ ಎ ಎಸ್ ಅವರು ಜೂನ್ 30 ರಂದು ಸರ್ಕಾರೀ ಸೇವೆಯಿಂದ ನಿವೃತ್ತರಾದರು . ಗಾಂಧಿ ಬಳಗ ಮತ್ತು ವಾರ್ತಾ ಬಳಗದ ಪರವಾಗಿ ಅವರಿಗೆ ಗಾಂಧಿ ಭವನದಲ್ಲಿ ಅಭಿನಂದನೆ ಸಲ್ಲಿಸಲಾಯಿತು. ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ವೂಡೇ ಪಿ ಕೃಷ್ಣ, ನಿವೃತ್ತ ಹೆಚ್ಚುವರಿ ಪ್ರಧಾನ ಕಾರ್ಯದರ್ಶಿ ಎಂ ಆರ್ ಶ್ರೀನಿವಾಸ ಮೂರ್ತಿ, ನಿವೃತ್ತ ಪ್ರಧಾನ ಕಾರ್ಯದರ್ಶಿ ಎಂ ಕೆ ಶಂಕರಲಿಂಗೇಗೌಡ, ಗಾಂಧಿ ಸ್ಮಾರಕ ನಿಧಿಯ ಕಾರ್ಯಾಧ್ಯಕ್ಷ ಎನ್ ಆರ್ ವಿಶುಕುಮಾರ್, ಗೌರವ ಕಾರ್ಯದರ್ಶಿ ಎಂ ಸಿ ನರೇಂದ್ರ ಮತ್ತು ಸದಸ್ಯರಾದ ಎಚ್ ಬಿ ದಿನೇಶ್, ಪ್ರೊ ಜಿ ಬಿ ಶಿವರಾಜ್, ಹಿರಿಯ ಪತ್ರಕರ್ತೆ ನಾಹಿದ್ ಅತಾವುಲ್ಲಾ ವೇದಿಕೆಯಲ್ಲಿದ್ದರು .




ಬೆಂಗಳೂರು ನಗರ ವಿಶ್ವವಿದ್ಯಾಲಯ, ಗಾಂಧಿ ಸ್ಮಾರಕ ನಿಧಿ, ರಾಜ್ಯ ಎನ್ ಎಸ್ ಎಸ್ ಕೋಶ , ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ , ಪ್ರಾಂತೀಯ ಎನ್ ಎಸ್ ಎಸ್ ನಿರ್ದೇಶನಾಲಯ , ಕೇಂದ್ರ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಗಳ ಸಹಯೋಗದಲ್ಲಿ ನಡೆದ ಐದು ದಿನಗಳ ಅಂತರ ರಾಜ್ಯ ರಾಷ್ಟ್ರೀಯ ಸೇವಾ ಯೋಜನೆ ಶಿಬಿರವನ್ನು ಬೆಂಗಳೂರು ನಗರ ವಿಶ್ವವಿದ್ಯಾಲಯದ ಉಪಕುಲಪತಿ ಲಿಂಗರಾಜ ಗಾಂಧಿ ಉದ್ಘಾಟಿಸಿದರು . ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷರಾದ ನಾಡೋಜ ವೂಡೇ ಪಿ ಕೃಷ್ಣ , ಕಾರ್ಯಾಧ್ಯಕ್ಷರಾದ ಎನ್ ಆರ್ ವಿಶುಕುಮಾರ್ , ಕಾರ್ಯಕ್ರಮ ನಿರ್ದೇಶಕರಾದ ಪ್ರೊ ಜಿ ಬಿ ಶಿವರಾಜ್, ರಾಜ್ಯ ಎನ್ ಎಸ್ ಎಸ್ ಅಧಿಕಾರಿ ಪ್ರತಾಪ್ ಲಿಂಗಯ್ಯ ,ಪ್ರಾಂತೀಯ ಎನ್ ಎಸ್ ಎಸ್ ನಿರ್ದೇಶಕರಾದ ಡಿ ಕಾರ್ತಿಕೇಯನ್ ,ಬೆಂಗಳೂರು ನಗರ ವಿಶ್ವ ವಿದ್ಯಾಲಯದ ಕಾರ್ಯಕ್ರಮ ಅಧಿಕಾರಿ ಗೋವಿಂದೇ ಗೌಡ ಇವರು ವೇದಿಕೆಯಲ್ಲಿದ್ದರು.




ಮಂಡ್ಯದ ಹಿರಿಯ ರಾಜಕೀಯ ಚೇತನ ದಿವಂಗತ ಜಿ ಮಾದೇಗೌಡರ ಹೆಸರಿನಲ್ಲಿ ಸಾಮಾಜಿಕ ಸೇವೆಗಾಗಿ ನೀಡುವ ಪ್ರಶಸ್ತಿಯನ್ನು ಗದಗದ ಹಿರಿಯ ಸಹಕಾರಿ ದುರೀಣ ಡಿ ಆರ್ ಪಾಟೀಲ್ ಅವರಿಗೆ ನೀಡಿ ಗೌರವಿಸಲಾಯಿತು . ಚಿತ್ರದಲ್ಲಿ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ ವೂಡೇ ಪಿ ಕೃಷ್ಣ , ಸದಸ್ಯರಾದ ಎಸ್ ಜಿ ಸಿದ್ಧರಾಮಯ್ಯ, ವಿಧಾನಪರಿಷತ್ ಸದಸ್ಯ ಮಧು ಮಾದೇಗೌಡ ರಾಜ್ಯ ಹಣಕಾಸು ಆಯೋಗದ ಅಧ್ಯಕ್ಷ ಸಿ ನಾರಾಯಣ ಸ್ವಾಮಿ, ಜಿ. ಮಾದೇಗೌಡ ಪ್ರತಿಷ್ಠಾನದ ಕಾರ್ಯದರ್ಶಿ ನಂಜೇಗೌಡ ಇದ್ದಾರೆ .



ಬೆಳಗಾವಿಯ ರಾಣಿ ಚನ್ನಮ್ಮ ವಿಶ್ವವಿದ್ಯಾಲಯ ಮತ್ತು ಕೆ ಎಲ್ ಇ ವಿಶ್ವವಿದ್ಯಾಲಯದ ಎನ್ ಎಸ್ ಎಸ್ ಅಧಿಕಾರಿಗಳು ಮತ್ತು ವಿದ್ಯಾರ್ಥಿಗಳಿಗೆ  ಪುನಶ್ಚೇತನ ಶಿಬಿರ ಏರ್ಪಡಿಸಲಾಗಿತ್ತು. ಗಾಂಧಿ ಸ್ಮಾರಕ ನಿಧಿಯ ಕಾರ್ಯಕ್ರಮಗಳ ನಿರ್ದೇಶಕರಾದ ಪ್ರೊ. ಜಿ ಬಿ ಶಿವರಾಜ್, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ವೂಡೇ ಪಿ ಕೃಷ್ಣ, ರಾಣಿ ಚನ್ನಮ್ಮ ವಿಶ್ವವಿದ್ಯಾಲಯದ ಉಪಕುಲಪತಿ ತ್ಯಾಗರಾಜ್ ಎನ್ ಎಸ್ ಎಸ್ ರಾಜ್ಯ ಅಧಿಕಾರಿ ಪ್ರತಾಪ್ ಲಿಂಗಯ್ಯ ವೇದಿಕೆಯಲ್ಲಿದ್ದರು.




ವಿಜಯಪುರದ ಮಹಿಳಾ ಪ್ರಥಮ ದರ್ಜೆ ಕಾಲೇಜಿನಲ್ಲಿ ದಿನಾಂಕ
26 .06.2024 ರಂದು ರಾಷ್ಟ್ರೀಯ ಸೇವಾ ಯೋಜನೆಯ ಒಂದು ದಿನದ ಶಿಬಿರ ಏರ್ಪಡಿಸಲಾಗಿತ್ತು.




ಲೀಲಾ ವಾಸುದೇವ್. ಮತ್ತು ಎಂ ಜೆ ಕಮಲಾಕ್ಷಿ ದತ್ತಿ ನಿಧಿ ಅಂಗವಾಗಿ ಪರಿಸರ ತಜ್ಞ ನಾಗೇಶ್ ಹೆಗಡೆ ಅವರು 19.06.2024 ರಂದು ಗಾಂಧಿ ಭವನದಲ್ಲಿ. 'ಗಾಂಧಿ ಮತ್ತು ಪರಿಸರ' ವಿಷಯದ ಉಪನ್ಯಾಸ ನೀಡಿದರು. ಶ್ರೀಮತಿ ಮಲಿನಿ ಪಿ ಕುಮಾರ್ ಅಧ್ಯಕ್ಷತೆ ವಹಿಸಿದ್ದರು .ಚಿತ್ರದಲ್ಲಿ ಗಾಂಧಿ ಸ್ಮಾರಕ ನಿಧಿ ಸದಸ್ಯರಾದ ಪ್ರೊ ಜೀವನ್ ಕುಮಾರ್, ಲೀಲಾ ವಾಸುದೇವ್, ಎಂ ಜೆ ಕಮಲಾಕ್ಷಿ, ಮಲಿನಿ ಪಿ ಕುಮಾರ್, ನಾಗೇಶ್ ಹೆಗಡೆ ಇದ್ದಾರೆ.




ತಿಪಟೂರಿನ ಗುರುಕುಲಾನಂದ ಆಶ್ರಮದಲ್ಲಿ ಜುಲೈ 8 ರಂದು ಏರ್ಪಡಿಸಿದ್ದ ಎಂ ಎಸ್ ಸಂದೀಪ್ ದತ್ತಿ ನಿಧಿ ಕಾರ್ಯಕ್ರಮದಲ್ಲಿ ಗಾಂಧಿ ಸ್ಮಾರಕ ನಿಧಿಯ ಕಾರ್ಯಕ್ರಮಗಳ ನಿರ್ದೇಶಕ ಪ್ರೊ ಜಿ ಬಿ ಶಿವರಾಜ್, ಕಾರ್ಯದರ್ಶಿ ಎಂ ಸಿ ನರೇಂದ್ರ, ಕಾರ್ಯಾಧ್ಯಕ್ಷ ಎನ್ ಆರ್  ವಿಶುಕುಮಾರ್, ನಿವೃತ್ತ ಹಿರಿಯ ಐ ಎ ಎಸ್ ಅಧಿಕಾರಿ ಎಂ ಕೆ ಶಂಕರಲಿಂಗೇಗೌಡ, ಗುರುಕುಲಾನಂದ ಆಶ್ರಮದ ಪೀಠಾಧ್ಯಕ್ಷರಾದ ಶ್ರೀ ಇಮ್ಮಡಿ ಕರಿಬಸವ ದೇಶಿಕೇಂದ್ರ ಸ್ವಾಮೀಜಿ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ವೂಡೇ ಪಿ ಕೃಷ್ಣ, ಬೆಂಗಳೂರಿನ ಭವತಾರಿಣಿ ಆಶ್ರಮದ ಮಾತೆ ವಿವೇಕಮಯಿ ಭಾಗವಹಿಸಿದ್ದರು .




ಕೊಪ್ಪಳ ಜಿಲ್ಲೆಯ ಇರಕಲಗಡ ಸರ್ಕಾರೀ ಪ್ರಥಮ ದರ್ಜೆ ಕಾಲೇಜಿನಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಆಶ್ರಯದಲ್ಲಿ ಗಾಂಧೀ ವಿಚಾರಗಳ ಮೂಲಕ ಯುವಸಬಲೀಕರಣ ವಿಚಾರ ಸಂಕಿರಣ ಏರ್ಪಡಿಸಲಾಗಿತ್ತು .

